KA / BG-GPO / 2515 / WPP-47 / 2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೧ | ಬೆಂಗಳೂರು, ಗುರುವಾರ, ಆಗಸ್ಟ್ ೩೧, ೨೦೦೬ (ಭಾದ್ರಪದ ೯, ಶಕ ವರ್ಷ ೧೯೨೮) | ಸಂಚಿಕೆ ೩೫ |
|---|---|---|

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಗುಲಬರ್ಗಾ**

**ಅಧಿಸೂಚನೆ**

**ಸಂಖ್ಯೆ: ಕಂ/ಸಂಕೀರ್ಣ/1/221/2005-06/228 ದಿನಾಂಕ; 1ನೇ ಜುಲೈ 2006.**

ಗುಲಬರ್ಗಾ ಜಿಲ್ಲೆಯ ಗ್ರಾಮೀಣ ಪ್ರದೇಶಗಳಲ್ಲಿ ಭಾರತೀಯ ವೈದ್ಯಪದ್ದತಿಗಳು ಮತ್ತು ಹೋಮಿಯೋಪತಿ ಇಲಾಖೆಯಲ್ಲಿ ಖಾಲಿ ಇರುವ ವೈದ್ಯಾಧಿಕಾರಿಗಳ ಹುದ್ದೆಗಳನ್ನು ಗುತ್ತಿಗೆ ಆಧಾರದ ಮೇಲೆ ತುಂಬುವ ಉದ್ದೇಶದಿಂದ ಈ ಅಧಿಸೂಚನೆಯ ಅನುಬಂಧ - 1 ಹಾಗೂ 2 ರಲ್ಲಿನ ನಿಬಂಧನೆ ಮತ್ತು ಷರತ್ತುಗಳಿಗೊಳಪಟ್ಟು ಈ ಕೆಳಕಂಡ ವೈದ್ಯಾಧಿಕಾರಿಯನ್ನು ನೇಮಿಸಲಾಗಿದೆ.

**ಆಯುರ್ವೇದ**

| ಕ್ರ. ಸ. | ಅಭ್ಯರ್ಥಿ ಹೆಸರು ಪೂರ್ತಿ ವಿಳಾಸ | ಮೀಸಲಾತಿ | ವರ್ಗೀಕರಣ | ವಯಸ್ಸು |
|---|---|---|---|---|
| 1 | ಡಾ: ಎನ್. ಶ್ರೀಮನ್ ನಾರಾಯಣ.<br>ತಂದೆ ಎನ್. ರಾಮಪ್ಪಾ<br>ಮು:ಪೋ: ನಜರಾಪೂರ<br>ವಾಯಾ: ಗುರುಮಠಕಲ್,<br>ತಾ: ಯಾದಗಿರಿ ಜಿ: ಗುಲಬರ್ಗಾ | ಪ್ರವರ್ಗ<br>56.178% | 1 | 36 ವರ್ಷ |

ಉಪನಿರ್ದೇಶಕರು ಭಾರತೀಯ ವೈದ್ಯಪದ್ದತಿಗಳು ಮತ್ತು ಹೋಮಿಯೋಪತಿ ಇಲಾಖೆ, ಗುಲಬರ್ಗಾ ಇವರು ನೇಮಕಾತಿ ಹೊಂದಿದ ವೈದ್ಯರನ್ನು ಕರ್ತವ್ಯಕ್ಕೆ ತೆಗೆದುಕೊಳ್ಳುವ ಮುನ್ನ ಅವರ ಜಾತಿ ಮತ್ತು ಆದಾಯ ಪ್ರಮಾಣ ಪತ್ರ ಕುರಿತು ಸಂಬಂಧಪಟ್ಟ ಪ್ರಾಧಿಕಾರಿಯವರಿಂದ ತನಿಖೆ ನಡೆಸಿ, ಸದರಿ ಪ್ರಮಾಣ ಪತ್ರಗಳು ಸರಿಯಾಗಿರುವ ಬಗ್ಗೆ ಖಚಿತಪಡಿಸಿಕೊಂಡು ಅಭ್ಯರ್ಥಿಗಳು ಕರ್ತವ್ಯಕ್ಕೆ ಹಾಜರಾಗುವಾಗ ಎಲ್ಲಾ ಮೂಲ ಪ್ರಮಾಣ ಪತ್ರಗಳನ್ನು ಅಂದರೆ ಜನ್ಮ ದಿನಾಂಕ, ವಿದ್ಯಾರ್ಹತೆ ಅಂಕಪಟ್ಟಿ, ವೈದ್ಯಕೀಯ ಪ್ರಮಾಣ ಪತ್ರ ಇತ್ಯಾದಿಗಳನ್ನು ಪರಿಶೀಲಿಸಿ ಅವುಗಳು ಸರಿಯಾಗಿರುವ ಬಗ್ಗೆ ದೃಡಪಡಿಸಿಕೊಂಡು ಸದರಿ ಅಭ್ಯರ್ಥಿಗಳಿಗೆ ಸ್ಥಳ ನಿಯುಕ್ತಿಗೊಳಿಸಿ ಚಲನಾದೇಶಗಳನ್ನು ನೀಡತಕ್ಕದ್ದು.

ನೇಮಕಾತಿ ಹೊಂದಿದ ವೈದ್ಯರು ಉಪನಿರ್ದೇಶಕರ ಕಾರ್ಯಾಲಯ, ಭಾರತೀಯ ವೈದ್ಯ ಪದ್ದತಿಗಳು ಮತ್ತು ಹೋಮಿಯೋಪತಿ ಇಲಾಖೆ, ಗುಲಬರ್ಗಾ ಇವರಲ್ಲಿ ಕರ್ತವ್ಯಕ್ಕೆ ಹಾಜರಾಗತಕ್ಕದ್ದು, ನೇಮಕಾತಿ ಆದೇಶವನ್ನು ಪಡೆದ 15 ದಿನಗಳ ಒಳಗೆ ಸದರಿ ವೈದ್ಯರು ನಿಯೋಜಿತ ಸ್ಥಳದಲ್ಲಿ ಕರ್ತವ್ಯಕ್ಕೆ ವರದಿ ಮಾಡಿಕೊಡತಕ್ಕದ್ದು. ಇಲ್ಲದಿದ್ದರೆ ಈ ನೇಮಕಾತಿಯನ್ನು ರದ್ದು ಪಡಿಸಲಾಗುವುದು.

ಕೆಲಸಕ್ಕೆ ಹಾಜರಾಗುವ ಮುನ್ನ ಅಭ್ಯರ್ಥಿಗಳು ಇಬ್ಬರು ಗೌರವಾನ್ವಿತ ವ್ಯಕ್ತಿಗಳಿಂದ ನಡತೆ ಪ್ರಮಾಣಪತ್ರವನ್ನು ಪಡೆದು ಈ ಅಧಿಸೂಚನೆಯ ಅನುಬಂಧ-2 ರಲ್ಲಿ ಹೇಳಿದ ನಿಬಂಧನೆ ಮತ್ತು ಷರತ್ತುಗಳನ್ನು ಒಪ್ಪಿಕೊಂಡಿರುವಂತೆ ಐವತ್ತು ರೂ: ಛಾಪಾ ಕಾಗದದ ಮೇಲೆ ನಿಗದಿತ ನಮೂನೆಯ ಮುಚ್ಚಳಿಕೆ (ಬಾಂಡ್) ಒಂದು ಸಲ್ಲಿಸತಕ್ಕದ್ದು. ಇದನ್ನು ಉಪನಿರ್ದೇಶಕರು, ಭಾರತೀಯ ವೈದ್ಯಪದ್ದತಿ ಹಾಗೂ ಹೋಮಿಯೋಪತಿ ಇಲಾಖೆ, ಗುಲಬರ್ಗಾ ಇವರ ಕಚೇರಿಯಲ್ಲಿ ಠೇವಣಿಯಾಗಿ ಇರಿಸಿಕೊಳ್ಳತಕ್ಕದ್ದು.

ಜಿಲ್ಲಾಧಿಕಾರಿಗಳು,
ಗುಲಬರ್ಗಾ.

ಪಿ.ಆರ್. 1157

## ಕೃಷಿ ಮಾರಾಟ ಇಲಾಖೆ

**ಕೃಷಿ ಮಾರಾಟ ನಿರ್ದೇಶಕರ ಕಛೇರಿ, ನಂ. 16, 11ನೇ ರಾಜಭವನ ರಸ್ತೆ, ಪಿ.ಬಿ. ನಂ. 5309, ಬೆಂಗಳೂರು**

**ಅಧಿಸೂಚನೆ**

**ಸಂಖ್ಯೆ: ಕೃಮಾಇ /115/ ನಿಯವಿ /2006, ಬೆಂಗಳೂರು, ದಿನಾಂಕ; 25ನೇ ಜುಲೈ 2006.**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966ರ (1966ರ 27ನೇ ಕರ್ನಾಟಕ ಅಧಿನಿಯಮ) ಪ್ರಕರಣ 6ರ ಉಪ ಪ್ರಕರಣ (2)ರ ಮೇರೆಗೆ ಹೊರಡಿಸಲಾಗಿದ್ದ ಅಧಿಸೂಚನೆ ಸಂ: ರಾಮಾಇ/54/ನಿಯವಿ/88, ದಿನಾಂಕ: 25.06.1988ರ ಅಧಿಸೂಚನೆಯಲ್ಲಿ (ಇನ್ನು ಮುಂದೆ ಸದರಿ ಅಧಿಸೂಚನೆ ಎಂದು ಉಲ್ಲೇಖಿಸಲಾಗಿದೆ) ಕರ್ನಾಟಕದಲ್ಲಿನ ಕೃಷಿ ಮಾರಾಟ ನಿರ್ದೇಶಕರು ಬೆಂಗಳೂರು ಇವರು ಬಿಜಾಪುರ ನಗರಸಭಾ ಪರಿಮಿತಿಯೊಳಗಿನ ಸ್ಥಳೀಯವಾಗಿ ಕಿರಾಣ ಬಜಾರ್ ಎಂದು ಕರೆಯಲ್ಪಡುವ ಸ್ಥಳವನ್ನು ಬೆಲ್ಲದ ಮಾರಾಟ ನಿಯಂತ್ರಣಕ್ಕಾಗಿ ಅನುಸೂಚಿಯಲ್ಲಿ ನಿಗದಿಪಡಿಸಿದ್ದ ಸ್ಥಳವನ್ನು ಬಿಜಾಪುರ ಸಮಿತಿಯ ಮಾರುಕಟ್ಟೆ ಉಪ ಪ್ರಾಂಗಣವೆಂದು ಘೋಷಿಸಿದ್ದರು.

ಅಲ್ಲಿಂದ ಬೆಲ್ಲದ ವಹಿವಾಟು ಘೋಷಣೆಯಾದ ಮೇಲಿನ ಸ್ಥಳದಲ್ಲಿ ನಡೆಯುತ್ತಾ ಬಂದಿರುತ್ತದೆ. ಆದರೆ, ದಿನಾಂಕ: 06.04.2006ರಿಂದ ಸದರಿ ಬೆಲ್ಲದ ವಹಿವಾಟನ್ನು ಮುಖ್ಯ ಮಾರುಕಟ್ಟೆ ಪ್ರಾಂಗಣದಲ್ಲಿರುವ ಉಳ್ಳಾಗಡ್ಡಿ ಪ್ರಾಂಗಣದಲ್ಲಿ ಲಭ್ಯವಿರುವ ಹರಾಜುಕಟ್ಟೆಗೆ ಸ್ಥಳಾಂತರಿಸಿದ್ದು, ಬೆಲ್ಲದ ವಹಿವಾಟು ಮುಖ್ಯ ಪ್ರಾಂಗಣದಲ್ಲಿಯೇ ನಡೆಯುತ್ತಿರುತ್ತದೆ. ಇನ್ನೂ ಹೆಚ್ಚುವರಿ ಸೌಲಭ್ಯಗಳನ್ನು ರೈತ ಸಮುದಾಯಕ್ಕೆ ಹಾಗೂ ಖರೀದಿದಾರರಿಗೆ ಪೂರೈಸಲು ಸಮಿತಿಯು ಕ್ರಮ ಕೈಗೊಂಡಿರುತ್ತದೆ. ಹೀಗಾಗಿ ಪ್ರಸ್ತುತ ಮಾರುಕಟ್ಟೆ ಪ್ರಾಂಗಣದಲ್ಲಿ ನಡೆಯುತ್ತಿರುವ ಬೆಲ್ಲದ ವಹಿವಾಟಿಗೆ ಯಾವುದೇ ತೊಂದರೆ ಇರುವುದಿಲ್ಲ.

ಆದುದರಿಂದ, ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966ರ ಪ್ರಕರಣ 3ನ್ನು ಓದಿ ಪ್ರಕರಣ 6ರ ಉಪ ಪ್ರಕರಣ (3)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕದಲ್ಲಿ ಕೃಷಿ ಮಾರಾಟ ನಿರ್ದೇಶಕನಾಗಿರುವ ಜಿ.ಎಸ್.ನಾರಾಯಣಸ್ವಾಮಿ ಆದ ನಾನು, ವಿಜಾಪುರ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ಮಾರುಕಟ್ಟೆ ಕ್ಷೇತ್ರದಲ್ಲಿ ಸರ್ಕಾರದ ಅಧಿಸೂಚನೆಗಳ ಮೂಲಕ ಕಾಲಕಾಲಕ್ಕೆ ಘೋಷಿಸಲಾದ ಕೃಷಿ ಉತ್ಪನ್ನಗಳ ಮಾರಾಟ ನಿಯಂತ್ರಣಕ್ಕಾಗಿ ಸದರಿ ಅಧಿಸೂಚನೆಗಳ ಮೂಲಕ ಘೋಷಿಸಲಾದ ಅನುಸೂಚಿಯಲ್ಲಿ ನಿರ್ಧಿಷ್ಟಪಡಿಸಿದ ಸೀಮಾಬದ್ಧ ಸ್ಥಳದ ಉಪ ಮಾರುಕಟ್ಟೆ ಪ್ರಾಂಗಣವನ್ನು ರದ್ದುಪಡಿಸಲು ಉದ್ದೇಶಿಸಿದ್ದೇನೆ.

**ಅನುಸೂಚಿ**

ವಿಜಾಪುರ ನಗರಸಭಾ ಪರಿಮಿತಿಯೊಳಗೆ ಸ್ಥಳೀಯವಾಗಿ "ಕಿರಾಣಾ ಬಜಾರ್" ಎಂದು ಕರೆಯಲ್ಪಡುವ ಈ ಕೆಳಗಿನ ಸೀಮಾಬದ್ಧ ವ್ಯಾಪಾರ ಸ್ಥಳ :

ಪೂರ್ವಕ್ಕೆ : ಬಾರಾಕಮಾನ ಮತ್ತು ಶಹಾಪೇಟ ಓಣಿ ರಸ್ತೆ

ಪಶ್ಚಿಮಕ್ಕೆ : ಸಿದ್ದೇಶ್ವರ ರಸ್ತೆ

ಉತ್ತರಕ್ಕೆ : ಸಿದ್ದೇಶ್ವರ ದೇವಾಲಯದ ಎದುರಿನ ರಸ್ತೆ (ಸ್ಟೇಷನ್ ಹಿಂಭಾಗದ ರಸ್ತೆ)

ದಕ್ಷಿಣಕ್ಕೆ : ಜೈನ ದೇವಾಲಯದ ಎದುರಿನ ಬೀದಿ (ಕಲಾದಗಿ ಗಲ್ಲಿ ಮತ್ತು ಕಬ್ರಾಜಿ ಬಜಾರ್)

ಮೇಲಿನ ಪ್ರಸ್ತಾವಕ್ಕೆ ಸಂಬಂಧಿಸಿದಂತೆ ಯಾವುದೇ ಆಕ್ಷೇಪಣೆ ಮತ್ತು ಸಲಹೆಗಳು ಇದ್ದಲ್ಲಿ ಈ ಅಧಿಸೂಚನೆಯು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ 32 ದಿನಗಳೊಳಗಾಗಿ ತಲುಪುವಂತೆ ಕಳುಹಿಸಿಕೊಟ್ಟಲ್ಲಿ ಪರಿಶೀಲಿಸಲಾಗುವುದು. ಆಕ್ಷೇಪಣೆ ಮತ್ತು ಸಲಹೆಗಳನ್ನು ಕೃಷಿ ಮಾರಾಟ ನಿರ್ದೇಶಕರು, ನಂ.16, 11ನೇ ರಾಜಭವನ ರಸ್ತೆ, ಬೆಂಗಳೂರು –560 001 ಇವರ ವಿಳಾಸಕ್ಕೆ ಕಳುಹಿಸಿಕೊಡಲು ಸೂಚಿಸಲಾಗಿದೆ.

**ಜಿ. ಎಸ್. ನಾರಾಯಣಸ್ವಾಮಿ**
ನಿರ್ದೇಶಕರು

ಪಿ.ಆರ್. 1159

**ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು**

**ಕ್ರಮಾಂಕ /ಜೆಆರ್‌ಬಿ/ಸಮಾಪನೆ/43/01-02, ದಿನಾಂಕ: 25ನೇ ಜುಲೈ 2006**

**ವಿಷಯ:** ಶ್ರೀ ರಾಮಕೃಷ್ಣ ಅಂಬರ ಚರಕ ಖಾದಿ ಗ್ರಾಮೋದ್ಯೋಗ ಸಹಕಾರ ಸಂಘ ನಿಯಮಿತ, ಆನೇಕಲ್, ಇದರ ಸಮಾಪನಾಧಿಕಾರಿಯನ್ನು ಬದಲಾಯಿಸುವ ಬಗ್ಗೆ.

**ಉಲ್ಲೇಖ:** 1) ಈ ಕಛೇರಿ ಆದೇಶ ಸಮಸಂಖ್ಯೆ ದಿನಾಂಕ: 26.07.2001.

2) ಸಮಾಪನಾಧಿಕಾರಿ, ಶ್ರೀ ರಾಮಕೃಷ್ಣ ಅಂಬರ ಚರಕ ಖಾದಿ ಗ್ರಾಮೋದ್ಯೋಗ ಸಹಕಾರ ಸಂಘ ನಿ:ಆನೇಕಲ್, ಬೆಂಗಳೂರುರವರ ಪತ್ರ ದಿನಾಂಕ: 11.07.2006.

**ಪ್ರಸ್ತಾವನೆ:**

ಶ್ರೀ ರಾಮಕೃಷ್ಣ ಅಂಬರ ಚರಕ ಖಾದಿ ಗ್ರಾಮೋದ್ಯೋಗ ಸಹಕಾರ ಸಂಘ ನಿಯಮಿತ, ಆನೇಕಲ್, ಈ ಸಹಕಾರ ಸಂಘವು ಸಮಾಪನೆಗೊಳಿಸಿ ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ) ಇವರು ಆದೇಶ ಹೊರಡಿಸಿರುತ್ತಾರೆ, ನಂತರ ಉಲ್ಲೇಖ (1) ರ ಈ ಕಛೇರಿ ಆದೇಶದಂತೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು (ಬಳಕೆ-1), ಸಹಕಾರ ಸಂಘಗಳ ಸಂಯುಕ್ತ ನಿಬಂಧಕರವರ ಕಛೇರಿ, ಬೆಂಗಳೂರು ಪ್ರಾಂತರವರನ್ನು ಸಂಘದ ಸಮಾಪನಾಧಿಕಾರಿಯಾಗಿ ನೇಮಿಸಲಾಗಿತ್ತು. ಹಾಲಿ ಸಂಘದ ಸಮಾಪನಾಧಿಕಾರಿರವರು ಸಂಘದ ಲೆಕ್ಕ ಪುಸ್ತಕಗಳ ಪ್ರಧಾರವನ್ನು ಹಿಂದಿನ ಪ್ರಭಾರಿ ಸಹಾಯಕ ನಿಬಂಧಕರಾದ ಶ್ರೀ ಪ್ರಕಾಶ್‌ರವರಿಂದ ದಿನಾಂಕ:05-07-2006 ರಂದು ವಹಿಸಿಕೊಂಡಿರುತ್ತಾರೆ.

ಸಂಘದ ಸಮಾಪನಾಧಿಕಾರಿರವರು ಸಹಕಾರ ಸಂಘಗಳ ಸಹಾಯಕ ನಿಬಂಧಕರು (ಬಳಕೆ-1), ಸಹಕಾರ ಸಂಘಗಳ ಸಂಯುಕ್ತ ನಿಬಂಧಕರವರ ಕಛೇರಿ, ಬೆಂಗಳೂರು ಪ್ರಾಂತ್ಯ ಬೆಂಗಳೂರು, ಈ ಕಛೇರಿ ಕೆಲಸದ ಒತ್ತಡದ ಜೊತೆಗೆ ಸಂಘದ ಸಮಾಪನಾಧಿಕಾರಿ ಕೆಲಸವನ್ನು ನಿರ್ವಹಿಸಲು ಕಷ್ಟವಾಗುತ್ತಿದೆಯೆಂದು ಸಂಘದ ಕಾರ್ಯವ್ಯಾಪ್ತಿಯು ಸಹಾಯಕ ನಿಬಂಧಕರು, 3ನೇ ವಲಯ, ಬೆಂಗಳೂರು ಅಥವಾ ಸಹಕಾರ ಅಭಿವೃದ್ಧಿ ಅಧಿಕಾರಿ, ಆನೇಕಲ್ ತಾಲ್ಲೂಕು, ಇವರಲ್ಲಿ ಒಬ್ಬರನ್ನು ಸಮಾಪನಾಧಿಕಾರಿಯಾಗಿ ನೇಮಿಸಬೇಕೆಂದು ಉಲ್ಲೇಖ (2)ರಲ್ಲಿ ಕೋರಿರುತ್ತಾರೆ.

ಸಹಕಾರ ಸಂಘಗಳ ಸಂಯುಕ್ತ ನಿಬಂಧಕರ ಕಛೇರಿ, ಬೆಂಗಳೂರು ಪ್ರಾಂತ್ಯ ಬೆಂಗಳೂರು ಈ ಕಛೇರಿಯಲ್ಲಿ ಮೊದಲು ಸಹಾಯಕ ನಿಬಂಧಕರು (ಬಳಕೆ-1) ಮತ್ತು ಬಳಕೆ-2 ಎಂಬ ಇಬ್ಬರು ಸಹಾಯಕ ನಿಬಂಧಕರು ಕೆಲಸ ನಿರ್ವಹಿಸುತ್ತಿದ್ದರು ಕ್ರಮೇಣ ಬದಲಾದ ಪರಿಸ್ಥಿತಿಯಲ್ಲಿ ಸಹಾಯಕ ನಿಬಂಧಕರು, ಬಳಕೆ-1 ಹುದ್ದೆಯನ್ನು ರದ್ದುಪಡಿಸಿ ಸಹಾಯಕ ನಿಬಂಧಕರು, ಬಳಕೆ-2 ಒಂದೇ ಹುದ್ದೆಯು ಮುಂದುವರಿದಿರುತ್ತದೆ. ಈ ಹಿಂದೆ ಎರಡು ಸಹಾಯಕ ನಿಬಂಧಕರು ನಿರ್ವಹಿಸುತ್ತಿದ್ದ ಕಛೇರಿ ಕೆಲಸವನ್ನು ಈಗ ಹಾಲಿ ಒಬ್ಬ ಸಹಾಯಕ ನಿಬಂಧಕರು ನಿರ್ವಹಿಸಬೇಕಾಗಿದ್ದು, ಕಛೇರಿ

ಕೆಲಸದ ಒತ್ತಡದ ಜೊತೆಗೆ ಸಂಘದ ಸಮಾಪನಾಧಿಕಾರಿ ಕೆಲಸವನ್ನು ನಿರ್ವಹಿಸುವುದು ಕಷ್ಟವಾಗಿದೆಯೆಂದು ಹಾಗೂ ಸಂಘದ ಆಸ್ತಿ-ಜವಾಬ್ದಾರಿಗಳನ್ನು ವಿಲೇವಾರಿ ಮಾಡಿ ಸಂಘದ ನೊಂದಣಿ ಸಂಖ್ಯೆ ರದ್ದತಿಗೆ ಅನುವಾಗಲು ಸಂಘದ ಕಾರ್ಯವ್ಯಾಪ್ತಿಯ ಸಹಾಯಕ ನಿಬಂಧಕರು, 3ನೇ ವಲಯ, ಬೆಂಗಳೂರು ಅಥವಾ ಸಹಕಾರ ಅಭಿವೃದ್ಧಿ ಅಧಿಕಾರಿ, ಆನೇಕಾಲ್ ತಾಲ್ಲೋಕು, ಇವರಲ್ಲಿ ಒಬ್ಬರನ್ನು ಸಮಾಪನಾಧಿಕಾರಿಯಾಗಿ ನೇಮಿಸಬೇಕೆಂದು ಉಲ್ಲೇಖ (2) ರಲ್ಲಿ ಸಂಘದ ಸಮಾಪನಾಧಿಕಾರಿಯವರು ಕೋರಿರುವಂತೆ. ಸಂಘದ ಸಮಾಪನಾಧಿಕಾರಿಯನ್ನು ಬದಲಾಯಿಸುವುದು ಸೂಕ್ತವೆಂದು ಪರಿಗಣಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 72 (2) (ಸಿ) ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ : ಸಿಎಂಡಬ್ಲ್ಯೂ:69:ಸಿಎಲ್‌ಎಂ: 2001, ದಿನಾಂಕ: 21.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ, ಕೆ.ಎ.ವೆಂಕಟೇಶ್, ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು, ಆದ ನಾನು ಶ್ರೀ ರಾಮಕೃಷ್ಣ ಅಂಬರ ಚರಕ ಖಾದಿ ಗ್ರಾಮೋದ್ಯೋಗ ಸಹಕಾರ ಸಂಘ ನಿಯಮಿತ, ಆನೇಕಲ್, ಇದರ ಸಮಾಪನಾಧಿಕಾರಿಯಾಗಿರುವ ಸಹಕಾರ ಸಂಘಗಳ ಸಹಾಯಕ ನಿಬಂಧಕರು (ಬಳಕೆ-1) ಸಹಕಾರ ಸಂಘಗಳ ಸಂಯುಕ್ತ ನಿಬಂಧಕರವರ ಕಛೇರಿ, ಬೆಂಗಳೂರು ಪ್ರಾಂತ, ಬೆಂಗಳೂರು ಇವರ ಬದಲಿಗೆ ಸಹಕಾರ ಅಭಿವೃದ್ಧಿ ಅಧಿಕಾರಿ, ಆನೇಕಲ್ ತಾಲ್ಲೋಕು, ಬೆಂಗಳೂರುರವರನ್ನು ಈ ಸಹಕಾರ ಸಂಘದ ಸಮಾಪನಾಧಿಕಾರಿಯಾಗಿ ನೇಮಕ ಮಾಡಿರುತ್ತೇನೆ.

ಸಮಾಪನಾಧಿಕಾರಿಯಾಗಿ ನೇಮಕಗೊಂಡ ಸಹಕಾರ ಅಭಿವೃದ್ಧಿ ಅಧಿಕಾರಿ, ಆನೇಕಲ್ ತಾಲ್ಲೂಕು, ಬೆಂಗಳೂರುರವರು ಸಂಘದ ಪ್ರಭಾರವನ್ನು ಹಿಂದಿನ ಸಮಾಪನಾಧಿಕಾರಿಯವರಿಂದ ಪಡೆದು, ಸಂಘದ ಆಸ್ತಿ - ಜವಾಬ್ದಾರಿಗಳನ್ನು ಸಹಕಾರ ಸಂಘಗಳ ನಿಬಂಧಕರ ಸುತ್ತೋಲೆಗನುಗುಣವಾಗಿ ಜರೂರು ವಿಲೇವಾರಿ ಮಾಡಿ ಸಂಘದ ನೊಂದಣಿ ರದ್ದತಿಗೆ ಪ್ರಸ್ತಾವನೆ ಸಲ್ಲಿಸುವಂತೆ ಆದೇಶಿಸಿದೆ. ಈ ಆದೇಶವು ಕೂಡಲೇ ಜಾರಿಗೆ ಬರುವುದು.

ಈ ಆದೇಶವನ್ನು ನನ್ನ ಹಸ್ತಾಕ್ಷರು ಹಾಗೂ ಕಛೇರಿ ಮುದ್ರೆಯೊಂದಿಗೆ ದಿನಾಂಕ : 25-07-2006 ರಂದು ಹೊರಡಿಸಿದೆ.

ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು,
ಬೆಂಗಳೂರು ಪ್ರಾಂತ, ಬೆಂಗಳೂರು.

ಪಿ.ಆರ್. 1160

**ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ, ಶಿವಮೊಗ್ಗ**

**ನಂ: ಬಿಸಿಎಂ /6ಕಾಪತ/ ಸಿಆರ್-9 / 2006-07, ದಿನಾಂಕ: 24ನೇ ಜುಲೈ 2006**

**ವಿಷಯ:** 2006-07ನೇ ಸಾಲಿಗೆ ಮತೀಯ ಅಲ್ಪಸಂಖ್ಯಾತರ ವರ್ಗಕ್ಕೆ ಸೇರಿದ ಕಾನೂನು ಪದವೀಧರರಿಂದ ತರಬೇತಿಗಾಗಿ ಅರ್ಜಿಯನ್ನು ಆಹ್ವಾನಿಸುವ ಬಗ್ಗೆ

**ಉಲ್ಲೇಖ:** 1) ಈ ಕಛೇರಿಯ ಸಮಸಂಖ್ಯೆ ಪತ್ರಿಕಾ ಪ್ರಕಟಣೆ ದಿನಾಂಕ : 19-6-2006.

ಶಿವಮೊಗ್ಗ ಜಿಲ್ಲೆಯ ವ್ಯಾಪ್ತಿಗೆ ಬರುವ ಅಲ್ಪಸಂಖ್ಯಾತರ ವರ್ಗಗಳಿಗೆ ಸೇರಿದ ಕಾನೂನು ಪದವೀಧರರಿಗೆ 2006-07ನೇ ಸಾಲಿನಲ್ಲಿ ಇಲಾಖಾ ವತಿಯಿಂದ ತರಬೇತಿ ಪಡೆಯುವ ಸಲುವಾಗಿ ತರಬೇತಿ ಆಯ್ಕೆಗಾಗಿ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಸ್ವೀಕರಿಸಲು ದಿನಾಂಕ : 20-07-2006ರಂದು ಕೊನೆಯ ದಿನಾಂಕವೆಂದು ಗೊತ್ತುಪಡಿಸಿ ಪ್ರಕಟಣೆ ನೀಡಲಾಗಿತ್ತು.

ಅರ್ಜಿ ಸ್ವೀಕರಿಸುವ ಕಡೆಯ ದಿನಾಂಕವನ್ನು 20-7-2006ರಿಂದ 11-8-2006ರವರೆಗೆ ವಿಸ್ತರಿಸಲಾಗಿದೆ. ಉಳಿದಂತೆ ನಿಬಂಧನೆಗಳು ಜಾರಿಯಲ್ಲಿರುತ್ತದೆ. ಹೆಚ್ಚಿನ ವಿವರಗಳಿಗೆ ಜಿಲ್ಲಾ ಅಧಿಕಾರಿಗಳು, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ, ಶಿವಮೊಗ್ಗ ಇವರನ್ನು ಕಛೇರಿ ವೇಳೆಯಲ್ಲಿ ಸಂಪರ್ಕಿಸಬಹುದು.

ಜಿಲ್ಲಾ ಅಧಿಕಾರಿಗಳು
ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ, ಶಿವಮೊಗ್ಗ

ಪಿ.ಆರ್. 1170

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯದ ನಡಾವಳಿಗಳು, ಬೆಂಗಳೂರು**

**ವಿಷಯ:** ಶ್ರೀಮತಿ. ಕೆ. ಎಸ್. ಮಮತ, ದ್ವಿ.ದ. ಸಹಾಯಕಿ ಸಾ.ಆ. ಕೆ.ಆರ್.ನಗರ, ಮೈಸೂರು ಜಿಲ್ಲೆ ಇವರ ಅನಧಿಕೃತ ಗೈರು ಹಾಜರಿ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**
1) ನಿರ್ದೇಶನಾಲಯದ ದೋಷಾರೋಪಣೆ ಹಾಗೂ ತಿಳುವಳಿಕೆಯ ಪತ್ರದ ಸಂ: ಡಿಪಿಎನ್ (5) : ಸಿ ಆರ್:84 : 04-05, ದಿ: 7-6-2005.
2) ನೌಕರರ ಲಿಖಿತ ಅಹವಾಲು ಪತ್ರದ ದಿನಾಂಕ: ಇಲ್ಲ.
3) ವಿಚಾರಣಾಧಿಕಾರಿಗಳ ನೇಮಕಾತಿ ಆದೇಶ ಸಂಖ್ಯೆ : ಡಿಪಿಎನ್ (5) : ಸಿಆರ್ : 84 : 04-05 ದಿ:12-8-2005.
4) ವಿಚಾರಣಾ ವರದಿಯ ಸಂ: ವಿಆ: ವಿಚಾರಣೆ : ಎನ್‌ಜಿ : 14 : 05-06, ದಿ : 1-2-2006.
5) ಪತ್ರಿಕಾ ಪ್ರಕಟಣೆ ದಿ: 1-4-2006ರ ಪ್ರಜಾವಾಣಿ ದಿನಪತ್ರಿಕೆ.
6) ನೌಕರರ ಲಿಖಿತ ಅಹವಾಲು ಪತ್ರ ದಿ: ಇಲ್ಲ.

**ಪ್ರಸ್ತಾವನೆ:**

ಶ್ರೀಮತಿ. ಕೆ. ಎಸ್.ಮಮತ, ದ್ವಿತೀಯ ದರ್ಜೆ ಸಹಾಯಕಿ, ಸಾರ್ವಜನಿಕ ಆಸ್ಪತ್ರೆ, ಕೆ.ಆರ್.ನಗರ, ಮೈಸೂರು ಜಿಲ್ಲೆ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ದಿನಾಂಕ : 1-4-2004 ರಿಂದ ಇಲ್ಲಿಯವರೆವಿಗೆ ಗೈರು ಹಾಜರಾದ ಬಗ್ಗೆ ಮೇಲೆ ಓದಲಾದ (1) ರಲ್ಲಿನ ಪತ್ರದಲ್ಲಿ ತಿಳುವಳಿಕೆ ಹಾಗೂ ದೋಷಾರೋಪಣಾ ಪಟ್ಟಿಯನ್ನು ಜಾರಿಗೊಳಿಸುದ್ದು, ಅದಕ್ಕೆ ಸಂಬಂಧಿಸಿದಂತೆ ಯಾವುದೇ ಲಿಖಿತ ಹೇಳಿಕೆಯನ್ನು ಸಲ್ಲಿಸದೆ ಇದ್ದ ಕಾರಣ ಪ್ರಕರಣದ ಬಗ್ಗೆ ಸತ್ಯಾಸತ್ಯತೆಯನ್ನು ಕಂಡು ಕೊಳ್ಳುವುದು ಸೂಕ್ತವೆಂದು ನಿರ್ಣಯಿಸಿ ಮೇಲೆ ಓದಲಾದ (3)ರಲ್ಲಿನ ಆದೇಶದಲ್ಲಿ ಮುಖ್ಯ ಜಾಗ್ರತ ಅಧಿಕಾರಿಗಳು, ಜಾಗ್ರತ ಕೋಶ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದ್ದು, ಮೇಲೆ ಓದಲಾದ (4) ರಂತೆ ವಿಚಾರಣಾಧಿಕಾರಿಗಳು, ವಿಚಾರಣೆ ನಡೆಸಿ ವರದಿಯನ್ನು ಸಲ್ಲಿಸಿರುತ್ತಾರೆ. ಮೇಲೆ ಓದಲಾದ (5) ರಲ್ಲಿನ ಸೂಚನಾ ಪತ್ರದಲ್ಲಿ ವಿಚಾರಣೆ ವರದಿಯ ಬಗ್ಗೆ ನೌಕರರಿಗೆ ಜಾರಿ ಮಾಡುವ ಸಂಬಂಧ ದಿ: 1-4-2006ರ ಪ್ರಜಾವಾಣಿ ದಿನ ಪತ್ರಿಕೆಯಲ್ಲಿ ಪತ್ರಿಕಾ ಪ್ರಕಟಣೆಯನ್ನು ನೀಡಿದ್ದು,

ಕರ್ತವ್ಯಕ್ಕೆ ಹಾಜರಾಗದೇ ಯಾವುದೇ ರಕ್ಷಣಾ ಹೇಳಿಕೆಯನ್ನು ಸಲ್ಲಿಸದೇ ವಿಚಾರಣಾಧಿಕಾರಿಗಳು ವಿಚಾರಣೆಗೆ ಹಾಜರಾಗುವಂತೆ ನೋಟೀಸು ಜಾರಿ ಮಾಡಿದಾಗ್ಯೂ ಯಾವುದಕ್ಕೂ ಸ್ಪಂದಿಸದೇ ಇರುವುದರಿಂದ ವಿಚಾರಣಾಧಿಕಾರಿಗಳು ನೀಡಿರುವ ವಿಚಾರಣಾ ವರದಿಯಲ್ಲಿ ನಿರ್ಣಯದ ವರದಿಯನ್ನು ಪರಿಶೀಲಿಸಿದ ತರುವಾಯ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶದ ಸಂಖ್ಯೆ : ಡಿಪಿಎನ್ (5): ಸಿಆರ್: 84:2004-05, ಬೆಂಗಳೂರು, ದಿ:25-7-2006**

1857ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಡಾ: ಎಂ.ಜಿ. ಪ್ರಸಾದ್, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶಕರು ಆದ ನಾನು ಶ್ರೀಮತಿ. ಕೆ. ಎಸ್. ಮಮತ, ದ್ವಿತೀಯ ದರ್ಜೆ ಸಹಾಯಕಿ, ಸಾರ್ವಜನಿಕ ಆಸ್ಪತ್ರೆ, ಕೆ.ಆರ್.ನಗರ, ಮೈಸೂರು ಜಿಲ್ಲೆ ಇವರು ದಿನಾಂಕ: 01-04-2004 ರಿಂದ ಇಲ್ಲಿಯವರೆವಿಗೂ ಅನಧಿಕೃತ ಗೈರು ಹಾಜರಿ ಬಗ್ಗೆ ದಂಡನೆಯಾಗಿ ಕೆ ಸಿ ಎಸ್ (ಸಿ ಸಿ ಎ) ನಿಯಮ 8(viii) ರ ಪ್ರಕಾರ ಮುಂದೆ ಸರ್ಕಾರಿ ಸೇವೆಗೆ ಅನರ್ಹರಾಗತಕ್ಕ ರೀತಿಯಲ್ಲಿ ಈ ಕೂಡಲೇ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಜಾಗೊಳಿಸಿ ಆದೇಶಿಸಿದೆ.

**ಡಾ: ಎಂ.ಜಿ. ಪ್ರಸಾದ್**
ನಿರ್ದೇಶಕರು
ಆರೋಗ್ಯ ಮತ್ತು ಕು.ಕ. ಸೇವೆಗಳು ಬೆಂಗಳೂರು.

ಪಿ.ಆರ್. 1188

**ಅಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರ ನ್ಯಾಯಾಲಯ,**
**ಅರಣ್ಯ ಸಂಚಾರಿ ದಳ, ಹಾಸನ**
**ಮುಟ್ಟುಗೋಲು ಆದೇಶ**
**ನಂ: ಹಾಸನ.ಅಸಂದಳ. ವಾಹನ.ಮು.ಗೋ. ಅಮೊ 61/05-06. ದಿನಾಂಕ : 18ನೇ ಜುಲೈ 2006**

**ಉಪಸ್ಥಿತರು :** ಶ್ರೀ ಸಿ. ಜಡ್. ಸೈಯದ್ ಗಫಾರ್, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಹಾಸನ.

**ಪಿರ್ಯಾದಿ :** ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಹಾಸನ.

**ಮಾಲೀಕರು :** ಇಲ್ಲ.

**ಪ್ರಕರಣದ ಹಿನ್ನೆಲೆ :-**

ದಿನಾಂಕ : 2-3-2006ರಂದು ಮಾರುತಿ ವ್ಯಾನ್ ನೊಂದಣಿ ಸಂಖ್ಯೆ : ಕೆಎ-09-ಎನ್-5903 ರಲ್ಲಿ ಒಟ್ಟು 20 ಕೆ.ಜಿ. ತೂಕದ ಶ್ರೀಗಂಧವನ್ನು ಯಾವುದೇ ರಹದಾರಿ ಇಲ್ಲದೇ ಯಾರೋ ಅಕ್ರಮವಾಗಿ ಶಿರಾ-ಬುಕ್ಕಾಪಟ್ಟಣ ರಸ್ತೆಯಲ್ಲಿ ಅರಣ್ಯ ಸಂಚಾರಿ ದಳ, ಹಾಸನದ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ ಮತ್ತು ಸಿಬ್ಬಂದಿಯವರು ಪತ್ತೆ ಹಚ್ಚಿ ವಾಹನ ಹಾಗೂ ಶ್ರೀಗಂಧವನ್ನು ಸರ್ಕಾರದ ಪರ ಅಮಾನತ್ತು ಪಡಿಸಿಕೊಂಡು ಪಂಚನಾಮೆ ಕ್ರಮ ಜರುಗಿಸಿ ವಾಹನ ಹಾಗೂ ಶ್ರೀಗಂಧದ ಬಗ್ಗೆ ಅರಣ್ಯ ಮೊಕದ್ದಮೆ 61/05-06ನ್ನು ದಾಖಲು ಮಾಡಿಕೊಂಡು ವಾಹನ ಮಾರುತಿ ವ್ಯಾನ್‌ನ ಇಂಜಿನ್ ನಂ: 1259432 ಚಾಸೀಸ್ ನಂ: ಎಸ್.ಟಿ.91-ಐಎನ್-137892 ಎಂಬುದಾಗಿರುತ್ತದೆಂದು ಹಾಗೂ ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ 3 ಜನ ಅಪರಾಧಿಗಳು ಓಡಿ ಹೋಗಿರುತ್ತಾರೆಂದು ತಿಳಿಸುತ್ತಾ, ಸಂಬಂಧಪಟ್ಟ ದಾಖಲಾತಿಗಳೊಂದಿಗೆ ವಾಹನ ಮತ್ತು ಶ್ರೀಗಂಧವನ್ನು 1963 ನೇ ಕರ್ನಾಟಕ ಅರಣ್ಯ ಕಾಯ್ದೆ ಸೆಕ್ಷನ್ 71-ಎ ಪ್ರಕಾರ ಮುಂದಿನ ಕ್ರಮ ಕೈಗೊಳ್ಳುವಂತೆ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳು ಈ ಪ್ರಾಧಿಕಾರಕ್ಕೆ ಹಾಜರುಪಡಿಸಿರುತ್ತಾರೆ. ಅದರಂತೆ ವಾಹನ ಮತ್ತು ಶ್ರೀಗಂಧವನ್ನು ಮುಂದಿನ ಆದೇಶದವರೆವಿಗೂ ಸುರಕ್ಷತೆಗೆ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳು, ಸರ್ಕಾರಿ ಶ್ರೀಗಂಧದ ಕೋಠಿ, ಹಾಸನ ಇವರ ವಶಕ್ಕೆ ನೀಡಲಾಗಿತ್ತು.

ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 71-ಎ ಪ್ರಕಾರ 30 ದಿವಸಗಳ ಕಾಲಾವಕಾಶವನ್ನು ಕೊಟ್ಟು ವಾಹನದ ಮಾಲೀಕರು: ವಾರಸುದಾರರು ಯಾರಾದರೂ ಇದ್ದರೆ, ವಾಹನಕ್ಕೆ ಸಂಬಂಧಿಸಿದಂತೆ ಮೂಲ ದಾಖಲಾತಿಗಳೊಂದಿಗೆ ಹಕ್ಕು ಬಾದ್ಯತೆಗಳನ್ನು ಈ ನ್ಯಾಯಾಲಯದ ಮುಂದೆ ಹಾಜರಾಗಿ ತಮ್ಮ ಮಾಲೀಕತ್ವವನ್ನು ರುಜುವಾತುಪಡಿಸುವುದು. ತಪ್ಪಿದಲ್ಲಿ ವಾಹನ ಹಾಗೂ ಶ್ರೀಗಂಧವನ್ನು 1963 ರ ಕರ್ನಾಟಕ ಅರಣ್ಯ ಕಾಯ್ದೆ ಸೆಕ್ಷನ್ 71-ಎ ಪ್ರಕಾರ ಮುಂದಿನ ಕ್ರಮ ಕೈಗೊಳ್ಳಲಾಗುವುದು ಎಂಬ ಬಗ್ಗೆ ಪ್ರಕಟಣೆಯನ್ನು ದಿನಾಂಕ: 22-4-2006 ರಂದು ಜ್ಞಾನದೀಪ ದಿನಪತ್ರಿಕೆಯಲ್ಲಿ ಹಾಗೂ 13-4-2006ರಂದು ಭಾಗ-6ಎ ರ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಚಾರ ಪಡಿಸಿ ಪ್ರಕಟಿಸಲಾಗಿದೆ.

ಈ ಮಧ್ಯೆ ವಾಹನದ ಮಾಲೀಕರ ವಿಳಾಸವನ್ನು ಕೋರಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಚಿಕ್ಕಮಗಳೂರುರವರಿಗೆ ಪತ್ರ ಬರೆಯಲಾಗಿ ಅವರಿಂದ ಮಾಹಿತಿ ಬಂದಿರುವುದಿಲ್ಲ.

ಮುಂದುವರಿದು ಹಾಲಿ ವಾಹನದ ವಾರಸುದಾರರನ್ನು ಪತ್ತೆ ಹಚ್ಚುವ ಬಗ್ಗೆ ಎಷ್ಟೇ ಪ್ರಯತ್ನಪಟ್ಟರೂ ವಾಹನದ ವಾರಸುದಾರರು ಪತ್ತೆಯಾಗದೇ ಇರುವುದರಿಂದ ಹಾಗೂ ನಿಗಧಿತ ಕಾಲಾವಕಾಶ ಈಗಾಗಲೇ ಮುಗಿದಿದ್ದು, ಈ ಮೊಕದ್ದಮೆಗೆ ಸಂಬಂಧಿಸಿದಂತೆ ಸಾಕಷ್ಟು ಕಾಲಾವಕಾಶವನ್ನು ಕೊಟ್ಟಿದ್ದರೂ ಕೂಡ ವಾಹನದ ವಾರಸುದಾರರು ಮೂಲ ದಾಖಲಾತಿಗಳನ್ನು ಹಾಜರುಪಡಿಸಿ ಮಾಲೀಕತ್ವವನ್ನು ರುಜುವಾತು ಪಡಿಸಿ ತಾವು ತಪ್ಪಿತಸ್ಥರಲ್ಲವೆಂದು ಸಾಬೀತು ಪಡಿಸಲು ವಿಫಲರಾದ ಕಾರಣ ಸಂಬಂಧಪಟ್ಟ ದಾಖಲಾತಿಗಳನ್ನು ಹಾಗೂ ಮುದ್ದೆಮಾಲುಗಳನ್ನು ಪರಿಶೀಲಿಸಿ ಶ್ರೀಗಂಧವು ಸರ್ಕಾರದ ಸ್ವತ್ತಾದ ಕಾರಣ ಹಾಗೂ ಈ ನ್ಯಾಯಾಲಯಕ್ಕೆ ಪ್ರಕರಣ ಪಂಚನಾಮೆಯನ್ನು ಏಕೆ ನಂಬಬಾರದು ಎಂಬ ಪ್ರಶ್ನೆ ಉದ್ಭವಿಸಿರುವುದರಿಂದ ಹಾಗೂ ಪ್ರಕರಣದ ಪಂಚನಾಮೆಯನ್ನು ಯಾರೂ ಸಹ ಪ್ರಶ್ನಿಸಿಲ್ಲವಾದ್ದರಿಂದ, ದಿನಾಂಕ: 2-3-2006 ರಂದು ಮಾರುತಿ ವ್ಯಾನ್‌ನಲ್ಲಿ 20 ಕೆ.ಜಿ. ಶ್ರೀಗಂಧವನ್ನು ಕಾನೂನು ಬಾಹಿರವಾಗಿ ಸಾಗಾಣಿಕೆ ಮಾಡುವಲ್ಲಿ ತೊಡಗಿದ್ದವು: ನಿರತವಾದುದೆಂದು ದೃಢಪಟ್ಟಿರುವುದರಿಂದ ಈ ಕೆಳಗಿನಂತೆ ಆದೇಶಿಸಿದ್ದೇನೆ.

**ಆದೇಶ**

ಮೇಲ್ಕಂಡ ವಿದ್ಯಾಮಾನಗಳ ಅನುಸಾರವಾಗಿ, ಸಿ. ಜಡ್. ಸೈಯದ್ ಗಫಾರ್, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಹಾಸನ ಆದ ನಾನು 1963ರ ಕರ್ನಾಟಕ ಅರಣ್ಯ ಕಾಯ್ದೆ ಸೆಕ್ಷನ್ 71-ಎ ಪ್ರಕಾರ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಒಂದು ಮಾರುತಿ ವ್ಯಾನ್ ನಂ: ಕೆ ಎ-01-ಎನ್-5903, ಇಂಜಿನ್ ನಂ: 1259432, ಚಾಸೀಸ್ ನಂ: ಎಸ್ಟಿ. 91-ಐಎನ್-137892 ಹಾಗೂ 20 ಕೆಜಿ ತೂಕದ

ಶ್ರೀಗಂಧವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು, ವಾಹನ ಮತ್ತು ಅದರ ಬಿಡಿ ಭಾಗಗಳನ್ನು ಸರ್ಕಾರಕ್ಕೆ ಅನುಕೂಲಕರ ರೀತಿಯಲ್ಲಿ ವಿಲೇವಾರಿ ಮಾಡುವಂತೆ ಆದೇಶಿಸಿದ್ದೇನೆ. ಸದರಿ ವಾಹನ ಮತ್ತು ಶ್ರೀಗಂಧ ಎಲ್ಲಾ ಋಣಭಾರಗಳಿಂದ ವಿಮುಕ್ತವಾಗಿರುತ್ತದೆ.

ಈ ಆದೇಶವು ಈ ದಿನ ಅಂದರೆ ದಿನಾಂಕ : 18-7-2006 ರಂದು ಸಂಪೂರ್ಣ ಜಾರಿಗೆ ಬರುತ್ತದೆ. ಈ ಆದೇಶ ಹೊರಡಿಸಿದ 30 ದಿನಗಳೊಳಗೆ ವಾಹನದ ಬಾಧ್ಯತೆದಾರರು ಮೇಲ್ಮನವಿ ಸಲ್ಲಿಸಿ ತಡೆಯಾಜ್ಞೆ ತರದೇ ಇದ್ದಲ್ಲಿ ಇದೇ ಅಂತಿಮ ಆದೇಶವಾಗಿ ಊರ್ಜಿತಗೊಳ್ಳುತ್ತದೆ.

ಈ ಆದೇಶವು ದಿನಾಂಕ : 18-7-2006 ರಂದು ನನ್ನ ಆದೇಶದಂತೆ ಬೆರಳಚ್ಚು ಮಾಡಿಸಿ ಈ ನ್ಯಾಯಾಲಯದ ಮೊಹರು ಹಾಕಿ ನನ್ನ ಸಹಿಯೊಂದಿಗೆ ಬಿಡುಗಡೆ ಮಾಡಿದ್ದೇನೆ.

**ಸಿ. ಜಡ್. ಸೈಯದ್ ಗಫಾರ್**
ಪಿ.ಆರ್. 1189 ಅಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ
ಅರಣ್ಯ ಸಂಚಾರಿ ದಳ, ಹಾಸನ.

**ಸಹಕಾರ ಸಂಘಗಳ ಉಪನಿಬಂಧಕರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಇವರ ಕಾರ್ಯಾಲಯ :**

**ನಂ: ಡಿಆರ್‌ಡಿ : ಎಲ್‌ಕ್ಯೂಡಿ : ಸಿ ಆರ್ : 3 : : 2006-07, ದಿನಾಂಕ: 18ನೇ ಜುಲೈ 2006**

**ವಿಷಯ:** ಸ್ಥಗಿತಗೊಂಡಿರುವ ಹಾಗಲಕೆರೆ ಹಾಲು ಉತ್ಪಾದಕರ ಸಹಕಾರ ಸಂಘ ನಿ. ಹೊಸದುರ್ಗ ತಾಲ್ಲೂಕು ಇದನ್ನು 1959ನೇ ಕ.ಸ.ಕಾ. ಕಲಂ 72 ರನ್ವಯ ಸಮಾಪನೆಗೊಳಿಸುವ ವಿಚಾರ.

**ಉಲ್ಲೇಖ :** ಸಹಕಾರ ಅಭಿವೃದ್ಧಿ ಅಧಿಕಾರಿ ಹೊಸದುರ್ಗ ತಾಲ್ಲೂಕು ಇವರ ಪತ್ರ ಸಂಖ್ಯೆ : ಸ. ಅ.ಅ. ಸ್ಥಗಿತ: ಸಿ ಆರ್ : 2006-07 ದಿ:01-07-2006

**ಪ್ರಸ್ತಾವನೆ :-**

ಸಹಕಾರ ಅಭಿವೃದ್ಧಿ ಅಧಿಕಾರಿ ಹೊಸದುರ್ಗ ತಾ. ಇವರ ಉಲ್ಲೇಖ (2) ರಲ್ಲಿ ಕಾಣಿಸಿರುವ ಪ್ರಸ್ತಾವೆ ಪ್ರಕಾರ ಮೇಲ್ಕಂಡ ಪ್ರಕಾರ ಸಂಘವು ಎಆರ್‌ಡಿ /166/48/ ದಿನಾಂಕ : 10-02-1989 ರ ಪ್ರಕಾರ ನೊಂದಣಿಯಾಗಿರುತ್ತದೆ. ಸಂಘದ ಕಾರ್ಯ ಚಟುವಟಿಕೆಗಳು ಅನೇಕ ವರ್ಷಗಳಿಂದ ಸ್ಥಗಿತಗೊಂಡಿರುತ್ತದೆ. ಸಂಘದ ಆಡಳಿತ ಸಮಿತಿಯವರು ಸಂಘದ ಅಭಿವೃದ್ಧಿ ಬಗ್ಗೆ ಗಮನಹರಿಸುವಲ್ಲಿ ವಿಫಲವಾಗಿರುವುದಲ್ಲದೆ ಸಂಘವನ್ನು ಪುನಃಶ್ಚೇತನಗೊಳಿಸುವಲ್ಲಿ ಆಸಕ್ತಿ ಹೊಂದಿರುವುದಿಲ್ಲ. ಈ ಸಂಘದಿಂದ ಸದಸ್ಯರಿಗೆ ಯಾವ ರೀತಿಯ ಪ್ರಯೋಜನವೂ ದೊರೆಯುತ್ತಿಲ್ಲವಾದ ಕಾರಣ ಸಂಘವನ್ನು ಪುನಃಶ್ಚೇತನಗೊಳಿಸುವ ಹಂತವನ್ನು ಮೀರಿರುವುದರ ಪ್ರಯುಕ್ತ ಸಂಘವನ್ನು ಇದೇ ರೀತಿ ಮುಂದುವರೆಸಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಮಾಪನೆಗೊಳಸುವುದೇ ಸೂಕ್ತವೆಂದು ಕಂಡು ಬಂದಿರುವ ಪ್ರಯುಕ್ತ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಮತ್ತು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72 (2) ರನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ : ಸಿಎಂಡಬ್ಲ್ಯೂ: 69: ಸಿ ಎಲ್ ಎಂ : 2001 : ದಿನಾಂಕ : 21-11-2001 ರ ಪ್ರಕಾರ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ ಚಿತ್ರದುರ್ಗ ಜಿಲ್ಲಾ ಸಹಕಾರ ಸಂಘಗಳ ನಿಬಂಧಕರು ಟಿ. ಓ. ಸುನಂದಮ್ಮ ಆದ ನಾನು ಹಾಗಲಕೆರೆ ಹಾಲು ಉತ್ಪಾದಕರ ಸಹಕಾರ ಸಂಘ ನಿ. ಹೊಸದುರ್ಗ ತಾಲ್ಲೂಕು ಇದನ್ನು ಸಮಾಪನೆಗೊಳಿಸಿ 1959 ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1) ರನ್ವಯ ಸಹಕಾರ ಅಭಿವೃದ್ಧಿ ಅಧಿಕಾರಿಗಳು ಹೊಸದುರ್ಗ ತಾ. ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ಅಧಿಕ ಪ್ರಭಾರದಲ್ಲಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಯು ಸಂಘದ ವಿಶಿಷ್ಟ ಪ್ರಭಾರವನ್ನು ಮತ್ತು ಸಂಘದ ಆಸ್ತಿಗಳನ್ನು ಸಂಘದ ಕಾರ್ಯದರ್ಶಿ ಅಥವಾ ಸಂಘದ ಪ್ರಭಾರ ಹೊಂದಿದ ಯಾವುದೇ ವ್ಯಕ್ತಿಯಿಂದ 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 73 (1) ಮತ್ತು 74 ರ ನಿಯಮದ ಪ್ರಕಾರ ಪಡೆದುಕೊಳ್ಳತಕ್ಕದ್ದು.

ನನ್ನ ಸ್ವಹಸ್ತ ಸಹಿ ಮತ್ತು ಕಛೇರಿಯ ಮುದ್ರೆಯೊಂದಿಗೆ ಈ ದಿನ ಅಂದರೆ ದಿನಾಂಕ : 18-07-2006ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪ ನಿಬಂಧಕರು,
ಪಿ.ಆರ್. 1191 ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.

**ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾತಿ ಅಧಿಕಾರಿಗಳು,**

**ತುಮಕೂರು ಉಪವಿಭಾಗ, ತುಮಕೂರು ಇವರ ನಡವಳಿಕೆಗಳು**

**ವಿಷಯ:** ಶ್ರೀ ಸಿದ್ದಲಿಂಗಯ್ಯ ಬಿನ್ ಪುಟ್ಟರೇವಣ್ಣ ತಿಮ್ಮಲಾಪುರ, ತುಮಕೂರು ತಾಲ್ಲೂಕ್ ಇವರ ಸ್ಥಿರ ಆಸ್ತಿಗಳನ್ನು ತುಮಕೂರು ತಾಲ್ಲೂಕು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿಯಮಿತ, ತುಮಕೂರು ಇವರ ಹೆಸರಿಗೆ ವರ್ಗಾವಣೆಗೊಂಡಿರುವ ಆಸ್ತಿಯನ್ನು ಪುನರ್ ವರ್ಗಾಯಿಸುವ ಬಗ್ಗೆ.

**ಉಲ್ಲೇಖ:** 1) ಈ ಕಛೇರಿ ಆದೇಶ ಸಂಖ್ಯೆ ಎ. ಆರ್. ಟಿ/ ಎ.ಬಿ.ಎನ್.ಸಿ.ಆರ್/887/2001-02 ದಿನಾಂಕ : 13-02-2002.

2) ವ್ಯವಸ್ಥಾಪಕರು ತುಮಕೂರು ತಾಲ್ಲೂಕು ಪ್ರಾಥಮಿಕ ಸಹಕಾರಿ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ತುಮಕೂರು ಇವರ ಪತ್ರ 78/06-07 ದಿನಾಂಕ 12-06-2006 ಮತ್ತು ಪತ್ರ ಸಂಖ್ಯೆ 97/2006-07 ದಿ. 27-06-2006

**ಪ್ರಸ್ತಾವನೆ :**

ಶ್ರೀ ಸಿದ್ದಲಿಂಗಯ್ಯ ಬಿನ್ ಪುಟ್ಟರೇವಣ್ಣ, ತಿಮ್ಮಲಾಪುರ, ತುಮಕೂರು ತಾಲ್ಲೂಕು, ಇವರು ತುಮಕೂರು ತಾಲ್ಲೂಕು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ. ತುಮಕೂರು ಈ ಬ್ಯಾಂಕಿನಲ್ಲಿ ಪಂಪುಸೆಟ್, ತೆಂಗು ಯೋಜನೆಯಲ್ಲಿ ಸಾಲ ಪಡೆದು ಸುಸ್ತಿದಾರರಾಗಿರುವುದರಿಂದ ಇವರಿಂದ ಬರಬೇಕಾದ ಅಸಲು, ಬಡ್ಡಿ, ಇತರೆ ಖರ್ಚು ಒಟ್ಟು ರೂ. 1,03,200-00 ಗಳು ದಿನಾಂಕ 20-02-2001 ರಿಂದ ಸುಸ್ತಿಯಾಗಿದ್ದು, ವಸೂಲಾತಿಗಾಗಿ ದಾವಾ ಸಂಖ್ಯೆ 2207, 2208, 2209/98-99 ರೀತ್ಯಾ ಕ್ರಮವಿಟ್ಟು ಡಿಕ್ರಿ ಆದೇಶ ಪಡೆದು ವಸೂಲಾತಿಗಾಗಿ ಅಮಲ್ಜಾರಿ ಸಂಖ್ಯೆ 73/2000-01, 436/99-2000 ರೀತ್ಯಾ ಅಮಲ್ಜಾರಿ ಕ್ರಮ ಜರುಗಿಸಿ ಬ್ಯಾಂಕಿನ ಮಾರಾಟಾಧಿಕಾರಿಯವರು ದಿನಾಂಕ 20-02-2001 ರಂದು ಬಹಿರಂಗವಾಗಿ ಇವರು ಆಧಾರ ಮಾಡಿಕೊಟ್ಟಿರುವ ಸ್ಥಿರಾಸ್ತಿಗಳನ್ನು ಹರಾಜು ನಡೆಸಿ, ಹರಾಜಿನಲ್ಲಿ ಯಾರು ಬಿಡ್ಡುದಾರರು ಬಾರದೇ ಇದ್ದುದರಿಂದ

ಮಾರಾಟಾಧಿಕಾರಿಗಳ ನಡವಳಿಕೆ ಮೇರೆಗೆ ಉಲ್ಲೇಖ (1)ರ ಆದೇಶದಲ್ಲಿ ಇವರ ಸ್ಥಿರಾಸ್ತಿಗಳನ್ನು ತಾಲ್ಲೂಕು ಪ್ರಾಥಾಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ತುಮಕೂರು ಇವರ ಹೆಸರಿಗೆ ವರ್ಗಾಯಿಸಿ ಆದೇಶ ನೀಡಲಾಗಿತ್ತು.

ವ್ಯವಸ್ಥಾಪಕರು ತಾಲ್ಲೂಕು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ತುಮಕೂರು ಇವರು ಉಲ್ಲೇಖ (2) ರಲ್ಲಿ ನಮೂದಿಸಿರುವ ಪತ್ರದಲ್ಲಿ ಸಾಲಗಾರರು ದಿನಾಂಕ 30-06-2005 ರಂದು ರಸೀತಿ ಸಂಖ್ಯೆ 4154 ರ ಪ್ರಕಾರ ಪೂರ್ಣ ಸಾಲ ತೀರುವಳಿಯಾಗಿರುತ್ತದೆ. ಸದರಿಯವರಿಗೆ ದಿನಾಂಕ 12-06-2006 ರಂದು ಸಾಲ ತೀರುವಳಿ ದೃಢೀಕರಣ ಪತ್ರ ನೀಡಿರುತ್ತದೆ. ಹಾಗೂ ಸದರಿಯವರು ಸ್ಥಿರಾಸ್ತಿಗೆ ಕಂದಾಯದ ರಸೀತಿ ನಂ. 2881812 ರಂತೆ ದಿನಾಂಕ 24-06-2006 ರಂದು ರೂ. 30-00 ಗಳನ್ನು ಪಾವತಿಸಿರುತ್ತಾರೆ. ಮತ್ತು ದಿನಾಂಕ 02-06-2006 ರಂದು ನಡೆದ ನಡವಳಿಕೆಯಲ್ಲಿ ಬ್ಯಾಂಕಿನ ಸುಸ್ತಿದಾರರ ಸ್ಥಿರಾಸ್ತಿಗಳು ಬ್ಯಾಂಕಿನ ಹೆಸರಿಗೆ ವರ್ಗಾಯಿಸಿರುವುದನ್ನು ಸಾಲ ಪೂರಾ ತೀರುವಳಿಯಾಗಿರುವುದರಿಂದ, ಬ್ಯಾಂಕಿನ ಹೆಸರಿನಿಂದ ಪುನರ್ ಸ್ಥಿರಾಸ್ತಿಯನ್ನು ಮೂಲ ಹಕ್ಕುದಾರರಿಗೆ ವರ್ಗಾಯಿಸಲು ಕೋರಿರುತ್ತಾರೆ.

ಸದರಿಯವರ ಮನವಿಯನ್ನು ಪುರಸ್ಕರಿಸಿ ಉಲ್ಲೇಖ (1)ರಲ್ಲಿ ದಿನಾಂಕ 13-02-2002 ರಂದು ಹೊರಡಿಸಿದ ಆದೇಶವನ್ನು ರದ್ದು ಪಡಿಸಿ ಈ ಕೆಳಕಂಡಂತೆ ಪುನರ್ ಆದೇಶ ಹೊರಡಿಸಲಾಗಿದೆ.

**ಆದೇಶ**

**ಕ್ರಮಸಂಖ್ಯೆ ಎ. ಆರ್. ಟಿ/ಎ. ಬಿ.ಎಸ್/ ಸಿ.ಆರ್/887/2001-02 ದಿನಾಂಕ : 04ನೇ ಜುಲೈ 2006**

ಪ್ರಸ್ತಾವನೆಯಲ್ಲಿರುವ ಅಂಶಗಳನ್ನು ಗಮನಿಸಿ ಶ್ರೀ ಟಿ. ಮುರುಳಿಕೃಷ್ಣಪ್ಪ, ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಿ ಅಧಿಕಾರಿಗಳು, ತುಮಕೂರು ಉಪವಿಭಾಗ ತುಮಕೂರು ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ನಿಯಮ 38(ಎ) 15 ರನ್ವಯ ಹಾಗೂ ಕರ್ನಾಟಕ ಸರ್ಕಾರ ಅಧಿಸೂಚನೆ ಸಂಖ್ಯೆ ಸಿ.ಎಂ.ಡಬ್ಲ್ಯೂ./69/ಸಿಸಿಎಂ./2001 ದಿನಾಂಕ 21-11-2001 ರ ರೀತ್ಯಾ ಕಾಲ ಪ್ರತ್ಯಾಯೋಜಿಸಲ್ಪಟ್ಟ ಅಧಿಕಾರವನ್ನು ಚಲಾಯಿಸಿ, ಶ್ರೀ ಸಿದ್ದಲಿಂಗಯ್ಯ ಬಿನ್ ಪುಟ್ಟರೇವಣ್ಣ, ಸರ್ವೆ ನಂ. 28/4 ಗ್ರಾಮ ಈಚಲಗುಂಟೆ 3.13 1/2 ಖುಷ್ಕಿ ಈ ಸ್ಥಿರಾಸ್ತಿಯನ್ನು ತಾಲ್ಲೂಕು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ತುಮಕೂರು ಈ ಬ್ಯಾಂಕಿನ ಹೆಸರಿಗೆ ವರ್ಗಾಯಿಸಲು ದಿನಾಂಕ 13-02-2002 ರಂದು ನೀಡಿದ ಆದೇಶವನ್ನು ಹಿಂತೆಗೆದುಕೊಂಡು ಸದರಿ ಸ್ಥಿರಾಸ್ತಿಯನ್ನು ಮೂಲ ಹಕ್ಕುದಾರರ ಶ್ರೀ ಸಿದ್ದಲಿಂಗಪ್ಪ ಬಿನ್ ಪುಟ್ಟರೇವಣ್ಣ, ತಿಮ್ಮಲಾಪುರ ತುಮಕೂರು ತಾಲ್ಲೂಕು ಇವರ ಹೆಸರಿಗೆ ನಿಲ್ಲಿಸಿ, ಪುನರ್ ವರ್ಗಾವಣೆ ಮಾಡಿ ಆದೇಶ ನೀಡಿರುತ್ತೇನೆ. ಈ ಆದೇಶಕ್ಕೆ ಸಹಕಾರ ಸಂಘಗಳ ಕಾಯಿದೆ ಅನ್ವಯ ನಮೂನೆ 8 ರ ನಿಗಧಿತ ನಮೂನೆಯಲ್ಲಿ ಸ್ಥಿರ ಸ್ವತ್ತುಗಳ ಪತ್ರವನ್ನು ಅಲಾಯಿದೆ ಲಗತ್ತಿಸಿದೆ.

ಈ ಕಛೇರಿಯ ಮೊಹರು ಹಾಗೂ ನನ್ನ ಸ್ವಹಸ್ತಾಕ್ಷರದೊಂದಿಗೆ ದಿನಾಂಕ 04-07-2006 ರಂದು ಪುನರ್ ಆದೇಶ ನೀಡಲಾಗಿದೆ.

**ನಮೂನೆ-VIII**

ಕರ್ನಾಟಕ ಸಹಕಾರ ಸಂಘಗಳ ನಿಯಮ 1960ರ ಬಂಧ 38(ಎ) ರೀತ್ಯಾ ಹಾಗೂ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 101ರ ಅನ್ವಯ ಪರಬಾರೆ ಬಗ್ಗೆ ಪ್ರಮಾಣ ಪತ್ರ

**ಸ್ಥಿರ ಸ್ವತ್ತುಗಳ ವರ್ಗಾವಣೆ ಪ್ರಮಾಣ ಪತ್ರ**

ತುಮಕೂರು ಜಿಲ್ಲೆ ತುಮಕೂರು ತಾಲ್ಲೂಕು, ಬೆಳ್ಳಾವಿ ಹೋಬಳಿ, ತಿಮ್ಮಲಾಪುರ ಗ್ರಾಮದ, ಶ್ರೀ ಸಿದ್ದಲಿಂಗಯ್ಯ ಬಿನ್ ಪುಟ್ಟರೇವಣ್ಣ ಇವರ ಸ್ಥಿರಾಸ್ತಿಯನ್ನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959 ರ ಕಲಂ 71ರ ಅನ್ವಯ ಆದೇಶವನ್ನು ಜಾರಿಮಾಡಿದ್ದರಿಂದ ಸದರಿಯವರ ಸ್ಥಿರ ಸ್ವತ್ತುಗಳನ್ನು ದಿನಾಂಕ 13-02-2001 ರಂದು ಈ ಕಛೇರಿ ಆದೇಶದ ಅಡಿಯಲ್ಲಿ ತಾಲ್ಲೂಕು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ತುಮಕೂರು ಇವರಿಗೆ ವರ್ಗಾಯಿಸಿದ್ದು, ಸದರಿ ಸಾಲಗಾರರಿಂದ ಬ್ಯಾಂಕಿಗೆ ಬರಬೇಕಾಗಿದ್ದ ಪೂರ ಹಣ ಸಂದಾಯವಾಗಿದ್ದು, ಸದರಿ ಸ್ಥಿರಾಸ್ತಿಗಳನ್ನು ಮೂಲ ಹಕ್ಕುದಾರರಿಗೆ ಪುನರ್ ವರ್ಗಾಯಿಸುವಂತೆ ಬ್ಯಾಂಕಿನ ಕೋರಿಕೆ ಮೇರೆಗೆ ಈ ಕೆಳಕಂಡ ಸ್ಥಿರಾಸ್ತಿಯನ್ನು ಮೂಲ ಹಕ್ಕುದಾರರಿಗೆ ಪುನರ್ ವರ್ಗಾಯಿಸುವಂತೆ ಬ್ಯಾಂಕಿನ ಕೋರಿಕೆ ಮೇರೆಗೆ ಈ ಕೆಳಕಂಡ ಸ್ಥಿರಾಸ್ತಿಯನ್ನು ಹಕ್ಕು ಅಧಿಕಾರ, ನಾಮ ಮತ್ತು ಬಾಧ್ಯತೆ ಶ್ರೀ ಸಿದ್ದಲಿಂಗಯ್ಯ ಬಿನ್ ಪುಟ್ಟರೇವಣ್ಣ. ತಿಮ್ಮಲಾಪುರ ತುಮಕೂರು ತಾಲ್ಲೂಕು ಇವರಿಗೆ ನಿರ್ದಿಷ್ಟವಾಗಿರತಕ್ಕದ್ದು ಮತ್ತು ಈ ಆದೇಶ ಸೇರಿಸಲ್ಪಟ್ಟ ಅಧಿಸೂಚನೆಯಲ್ಲಿ ವಿಧಿಸಲಾದ ಷರತ್ತುಗಳಿಗೆ ಮತ್ತು ನಿಯಮಾವಳಿಗೆ ಒಳಪಟ್ಟು ಸ್ಥಿರಾಸ್ತಿಯನ್ನು ಮೂಲ ಹಕ್ಕುದಾರರಿಗೆ ಒಪ್ಪಿಸತಕ್ಕದ್ದೆಂದು ಅಧಿನಿಯಮ 101ರ ಪ್ರಕಾರ ಅನ್ವಯ ಈ ಮೇಲಿನ ಆದೇಶ ನೀಡಲಾಗಿದೆ.

**ಸ್ವತ್ತುಗಳ ವಿವರ**

| ಗ್ರಾಮ | ಸರ್ವೆ ನಂ. | ವಿಸ್ತೀರ್ಣ | ತರಹೆ | ಹಕ್ಕುದಾರರ ವಿಳಾಸ |
|---|---|---|---|---|
| ಈಚಲಗುಂಟೆ | 28/4 | ಖುಷ್ಕಿ | ಖುಷ್ಕಿ | ಶ್ರೀ ಸಿದ್ದಲಿಂಗಯ್ಯ ಬಿನ್ ಪುಟ್ಟರೇವಣ್ಣ |

**ಷರತ್ತು ಮತ್ತು ನಿಯಮಗಳು**

01. ಶ್ರೀ ಸಿದ್ದಲಿಂಗಯ್ಯ ಬಿನ್ ಪುಟ್ಟರೇವಣ್ಣ, ತಿಮ್ಮಲಾಪುರ, ತುಮಕೂರು ತಾಲ್ಲೂಕು ವರ್ಗಾವಣೆ ಮಾಡಿದ ಸ್ವತ್ತುಗಳನ್ನು ಇವರೇ ಉಪಯೋಗಿಸತಕ್ಕದ್ದು.
02. ಪುನಃ ಮಾರಾಟ ಮಾಡುವ ಹಕ್ಕು ಇವರು ಹೊಂದಿರುತ್ತಾರೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ತುಮಕೂರು ಉಪವಿಭಾಗ, ತುಮಕೂರು.

ಪಿ.ಆರ್. 1186

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**

**ಬಿ3:ಅಮೊ:ವಾಹನ-30/05-06 ದಿನಾಂಕ : 29ನೇ ಜುಲೈ 2006**

| | | |
|---|---|---|
| **ಉಪಸ್ಥಿತರು** | : | ಶ್ರೀ ಜಿ.ಜಯರಾಮಯ್ಯ ಭಾ.ಅ.ಸೇ. ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ |
| **ಫಿರ್ಯಾಧಿದಾರರು** | : | ವಲಯ ಅರಣ್ಯಾಧಿಕಾರಿ, ಸೊರಬ ವಲಯ, ಸೊರಬ. |
| **ಆರೋಪಿಗಳು** | : | ಪತ್ತೆಯಾಗಿರುವುದಿಲ್ಲ. |
| **ಭಾದ್ಯತೆದಾರರು** | : | ಯಾರು ಬಂದಿರುವುದಿಲ್ಲ. |

**ಪ್ರಸ್ತಾವನೆ :**

ದಿ: 26-02-2006ರಂದು ಸೊರಬ ವಲಯದ ಟೌನ್ ಗಸ್ತಿನ ವನಪಾಲಕರು ಸೊರಬ ತಾಲ್ಲೂಕು ಕಸಬಾ ಹೋಬಳಿ ಸೊರಬ ಟೌನ್ ಶ್ರೀರಂಗನಾಥ ಸ್ವಾಮಿ ದೇವಸ್ಥಾನದ ಬಳಿ ಸಂಜೆ 6-45ರ ಸಮಯದಲ್ಲಿ ಗಸ್ತು ಮಾಡುತ್ತಿರುವಾಗ ದೇವಸ್ಥಾನದ ಹತ್ತಿರದ ರಸ್ತೆಯಲ್ಲಿ ಒಂದು ವಾಹನ ನಿಂತಿದ್ದು ಅದರ ಬಳಿ ಯಾರೂ ಆಸಾಮಿಗಳು ಇರಲಿಲ್ಲ. ವಾಹನ ಪರಿಶೀಲಿಸಿ ನೋಡಲಾಗಿ ದ್ವಿಚಕ್ರವಾಹನ ಬಜಾಜ್ ಎಂ-80 ಕೆಎ-31-ಹೆಚ್-3044 ಆಗಿದ್ದು ಈ ವಾಹನದ ಕ್ಯಾರಿಯರ್‌ನಲ್ಲಿ ಚೀಲದಲ್ಲಿ ಶ್ರೀಗಂಧದ ಸಣ್ಣ 6 ತುಂಡುಗಳಿದ್ದು ಒಟ್ಟು ತೂಕ 8 ಕೆ.ಜಿ. ಇದ್ದು ಇದನ್ನು ಸಾಗಿಸಲು ರಹದಾರಿ ಇಲ್ಲದ ಕಾರಣ ಇದು ಅಕ್ರಮ ದಾಸ್ತಾನು ಎಂದು ಪರಿಗಣಿಸಿ, ವಾಹನ ಮತ್ತು ಶ್ರೀಗಂಧವನ್ನು ಇಲಾಖಾ ಪರ ಜಪ್ತಿಮಾಡಿ ಪ್ರಥಮ ವರ್ತಮಾನ ವರದಿ, ಮತ್ತು ಮಹಜರ್ ಕ್ರಮ ಜರುಗಿಸಿ ಅರಣ್ಯ ಮೊಕದ್ದಮೆ ಸಂಖ್ಯೆ: 160/05-06ನ್ನು ದಾಖಲಿಸಿ ನಂತರ ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸಾಗರ ವಲಯದ ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸಾಗರ ಇವರ ಸುಪರ್ಧಿಗೆ ಕೊಡಲು ಆದೇಶವಾಗಿದೆ.

ನಂತರ ಈ ವಾಹನದ ಆರ್.ಸಿ. ಮಾಲೀಕರ ಬಗ್ಗೆ ಬಿ ಎಕ್ಸ್‌ಟ್ರ್ಯಾಕ್ಟ್‌ನ್ನು ಈ ನ್ಯಾಯಾಲಯಕ್ಕೆ ಒದಗಿಸಲು ಪ್ರಾದೇಶಿಕ ಸಾರಿಗೆ ಅಧಿಕಾರಿ, ಶಿರಸಿ ಇವರಿಗೆ ದಿ: 10-03-2006ರಲ್ಲಿ ಪತ್ರ ಬರೆದು ಒದಗಿಸಲು ಕೋರಲಾಗಿತ್ತು. ಇವರಿಂದ ದಿ: 16-06-2006ರಂದು ಈ ನ್ಯಾಯಾಲಯಕ್ಕೆ ಈ ವಾಹನದ ಬಿ ಎಕ್ಸ್‌ಟ್ರ್ಯಾಕ್ಟ್ ಒದಗಿಸಿರುತ್ತಾರೆ. ಆರ್.ಸಿ. ಮಾಲೀಕರಾದ ಶ್ರೀ ವಿನಾಯಕ ಶಿವಲಿಂಗ ನಾಯಕ, ಅಮೀನ ಸರ್ಕಲ್, ಸಿದ್ದಾಪುರ ಇವರಿಗೆ ಮತ್ತು ಫೈನಾನ್ಸರ್ ಆದ ಶ್ರೀ ಮಹಾಲಸಾ ಕೋ ಆಫ್ ಕ್ರೆಡಿಟ್ ಸೊಸೈಟಿ ಲಿ. ಸಿದ್ದಾಪುರ ಇವರಿಗೆ ದಿ: 17-06-2006ರಂದು ಕಾರಣ ಕೇಳಿ ಪತ್ರವನ್ನು ವಲಯ ಅರಣ್ಯಾಧಿಕಾರಿ, ಸಿದ್ದಾಪುರ ಇವರ ಮುಖಾಂತರ ಜಾರಿ ಮಾಡಿದ್ದು, ಆರ್.ಸಿ. ಮಾಲೀಕರಾದ ಶ್ರೀ ವಿನಾಯಕ ಶಿವಲಿಂಗ ನಾಯಕ ಇವರು ಸದರಿ ವಿಳಾಸದಲ್ಲಿ ಇರುವುದಿಲ್ಲವೆಂದು ವಲಯ ಅರಣ್ಯಾಧಿಕಾರಿ, ಸಿದ್ದಾಪುರ ಇವರ ಪತ್ರ ಸಂಖ್ಯೆ : 287/06-07 ದಿ: 06-07-2006ರಲ್ಲಿ ತಿಳಿಸಿರುತ್ತಾರೆ ಮತ್ತು ಫೈನಾನ್ಸಿನಿಂದ ಸಹ ಯಾವುದೇ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿರುವುದಿಲ್ಲ. ಅಲ್ಲದೇ ಈ ವಾಹನವನ್ನು ಹಾಗೆ ತುಂಬ ಸಮಯ ನಿಲ್ಲಿಸಿದಲ್ಲಿ ಹಾಳಾಗುವುದರಿಂದ ಈ ಕೆಳಗಿನಂತೆ ಕ್ರಮ ಕೈಗೊಳ್ಳಲಾಯಿತು.

ಈ ವಾಹನದ ಬಗ್ಗೆ ಹೆಚ್ಚಿನ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ 30 ದಿನಗಳ ಕಾಲಾವಕಾಶ ನೀಡಿ ಪ್ರಕಟಣೆಯನ್ನು ದಿ: 10-03-2006ರಂದು ಹೊರಡಿಸಿ ಪ್ರತಿಯನ್ನು ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ ಬೆಂಗಳೂರು ಮತ್ತು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಬೆಂಗಳೂರು ಇವರಿಗೆ ಕಳುಹಿಸಿ ಹೆಚ್ಚು ಪ್ರಸಾರವಿರುವ ರಾಜ್ಯ ಮಟ್ಟದ ದೈನಿಕ ಪತ್ರಿಕೆಯಲ್ಲಿ ಮತ್ತು ಗೆಜೆಟ್‌ನಲ್ಲಿ ಪ್ರಕಟಿಸಲು ಕೋರಲಾಗಿತ್ತು. ಅದರಂತೆ ಈ ಪ್ರಕಟಣೆಯನ್ನು ದಿ: 28-03-2006ರಂದು ಸಾಗರ ವಾರ್ತೆ, ವನರಾಜ ದಿನಪತ್ರಿಕೆಯಲ್ಲಿ ಮತ್ತು ದಿ: 13-04-2006ರಂದು ರಾಜ್ಯ ಪತ್ರದಲ್ಲಿ ಪ್ರಕಟಗೊಂಡು 30 ದಿನಗಳಾದರು ವಾಹನ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಕಾನೂನುಬದ್ಧವಾಗಿ ದಾಖಲೆಗಳನ್ನು ಅರ್ಜಿ ಮೂಲಕ ಸಲ್ಲಿಸಿ ವಾಹನ ಬಿಡುಗಡೆಗೆ ಕೋರಿರುವುದಿಲ್ಲ. ಇದರಿಂದ ಈ ವಾಹನವು ಅರಣ್ಯ ಉತ್ಪನ್ನವನ್ನು ಅಕ್ರಮವಾಗಿ ಸಾಗಿಸಲು ಉಪಯೋಗಿಸಿಲ್ಲವೆನ್ನುವುದನ್ನು ಸಾಬೀತುಪಡಿಸಲು ವಾಹನ ಮಾಲೀಕರು ವಿಫಲರಾಗಿರುತ್ತಾರೆ. ಆದ್ದರಿಂದ ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ವಿದ್ಯಾಮಾನಗಳನ್ನು ಗಣನೆಗೆ ತಗೆದುಕೊಂಡು ಶ್ರೀ ಜಿ. ಜಯರಾಮಯ್ಯ, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ) ಪ್ರಕಾರ ವಲಯ ಅರಣ್ಯಾಧಿಕಾರಿ, ಸೊರಬ ಇವರು ಜಪ್ತು ಮಾಡಿದ ವಾಹನ ಬಜಾಜ್ ಎಂ-80, ಕೆಎ-31, ಹೆಚ್-3044 ಮತ್ತು ಈ ವಾಹನದಲ್ಲಿದ್ದ 6 ತುಂಡು ಶ್ರೀಗಂಧದ ತೂಕ 8 ಕೆ.ಜಿ. ಕರ್ನಾಟಕ ಸರ್ಕಾರದ ಸಂಪತ್ತು ಆಗಿರುವುದರಿಂದ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕ ಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿ: 29-07-2006ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30(ಮೂವತ್ತು) ದಿನಗಳ ಒಳಗಾಗಿ ಯಾರು ಈ ನ್ಯಾಯಾಲಯಕ್ಕೆ ಕಾನೂನುಬದ್ಧವಾಗಿ ವಾಹನ ಬಿಡಿಸಿಕೊಳ್ಳಲು ಅರ್ಜಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ

ಪಿ.ಆರ್. 1196

**ಅಧೀಕೃತ ಅಧಿಕಾರಿಗಳು ಹಾಗೂ ಅಧೀಕ್ಷಕರು, ವಿಚಕ್ಷಣ ದಳ ಬೆಳಗಾಂವ ಜಿಲ್ಲೆ ಇವರ ನ್ಯಾಯಾಲಯದಲ್ಲಿ**
**ರಾಮದುರ್ಗ ಪೋಲಿಸ್ ಠಾಣೆ ಗುನ್ನೆ ಸಂಖ್ಯೆ : 180/2000**

**ಫಿರ್ಯಾದಿದಾರರು** **ವಿರುದ್ಧ** **ಆರೋಪಿತರು**

**ಪಿ.ಎಸ್.ಐ.ರಾಮದುರ್ಗ ಪೋಲಿಸ್ ಠಾಣೆ**

1) ರೆಹಮಾನ ಹಸನಸಾಬ ಹಳೀಮನಿ ಸಾ:ಮರಾಠಾ ಕಾಲನಿ, ಧಾರವಾಡ
2) ಚಾಂದು ಮದನಸಾಗ ಶಿರಸಂಗಿ ಸಾ: ಗುಡ್ಡದಕೇರಿ, ನವಲಗುಂದ

**ಪ್ರಕರಣದ ಮುಖ್ಯಾಂಶಗಳು :**

ಪಿರ್ಯಾದಿದಾರರು ತಮಗೆ ಬಂದ ಖಾತ್ರಿದಾಯಕ ಮಾಹಿತಿ ಮೇರೆಗೆ 24-12-2000 ರಂದು ಬೆಳಿಗ್ಗೆ 6-30 ಗಂಟೆಗೆ ಸಿಬ್ಬಂದಿ ಹಾಗೂ ಪಂಚರೊಡನೆ ರಾಮದುರ್ಗದಲ್ಲಿ ವೆಂಕಟೇಶ್ವರ ಗುಡಿ ಹತ್ತಿರ ರಾಮದುರ್ಗ-ಸವದತ್ತಿ ರಸ್ತೆಯ ಮೇಲೆ ಕಾಯುತ್ತಿದ್ದಾಗ ಸವದತ್ತಿ ಕಡೆಯಿಂದ ಮೆಟಡೋರ ಟೆಂಪೋ ಸಂಖ್ಯೆ: ಕೆಎ-34-1175 ಬರುತ್ತಿರುವುದನ್ನು ತಡೆದು ನಿಲ್ಲಿಸಿ ತಪಾಸಣೆ ಮಾಡಲಾಗಿ ಅದರಲ್ಲಿ 44 ಮದ್ಯದ ಪೆಟ್ಟಿಗೆಗಳಿದ್ದು ಕಂಡುಬಂದಿದ್ದು ಅವುಗಳ ಪೈಕಿ ಪ್ರತಿಯೊಂದರಲ್ಲಿ 180 ಮಿಲಿ ಮದ್ಯ ತುಂಬಿದ ರಾಜಾ ವಿಸ್ಕಿ ಲೇಬಲ್‌ವುಳ್ಳ 48 ಬಾಟ್ಲಿಗಳನ್ನು ತುಂಬಿದ 16 ಪೆಟ್ಟಿಗೆಗಳು ಹಾಗೂ ಪ್ರತಿಯೊಂದರಲ್ಲಿ 180 ಮಿಲಿ ಮದ್ಯ ತುಂಬಿದ ರಾಜಾ ತ್ರಿಎಕ್ಸ್ ರಮ್ ಲೇಬಲ್‌ವುಳ್ಳ 48 ಬಾಟ್ಲಿಗಳನ್ನು ತುಂಬಿದ 28 ಪೆಟ್ಟಿಗೆಗಳು ಇದ್ದು ಅವುಗಳನ್ನು ಯಾವುದೇ ಪರಮಿಟ ಅಥವಾ ಲೈಸನ್ಸ್ ಇಲ್ಲದೆ ಸಾಗಾಣಿಕೆ ಮಾಡುತ್ತಿದ್ದುದರಿಂದ ಪಂಚನಾಮೆಯಡಿಯಲ್ಲಿ ಮದ್ಯದಿಂದ ಶ್ಯಾಂಪಲ್‌ಗಳನ್ನು ತೆಗೆದು ವಾಹನವನ್ನು ಚಲಿಸುತ್ತಿದ್ದ ಒಂದನೇ ಆರೋಪಿತನನ್ನು ಹಾಗೂ ಕ್ಲೀನರ್‌ನಾದ ಎರಡನೇ ಆರೋಪಿತನನ್ನು ಬಂಧಿಸಿ ವಾಹನ ಹಾಗೂ ಮದ್ಯದ ಪೆಟ್ಟಿಗೆಗಳನ್ನು ಜಪ್ತು ಮಾಡಿಕೊಂಡು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 34 ರ ಪ್ರಕಾರ ಶಿಕ್ಷಾರ್ಹ ಅಪರಾಧವೆಸಗಿದ್ದರಿಂದ ಸಂಖ್ಯೆ: 180/2000 ದಿನಾಂಕ: 24-12-2000 ರಂತೆ ರಾಮದುರ್ಗ ಪೋಲಿಸ್ ಠಾಣೆಯಲ್ಲಿ ಗುನ್ನೆ ದಾಖಲು ಮಾಡಿರುತ್ತಾರೆ. ಪ್ರಥಮ ವರ್ತಮಾನ ವರದಿಯನ್ನು ನ್ಯಾಯಾಲಯಕ್ಕೆ ಸಲ್ಲಿಸಿ ಅದರ ಪ್ರತಿಯೊಂದಿಗೆ ಜಪ್ತು ಮಾಡಿದ ವಸ್ತುಗಳ ಪಟ್ಟಿಯನ್ನು ಅಧೀಕೃತ ಅಧಿಕಾರಿಗಳಾದ ಅಬಕಾರಿ ಅಧೀಕ್ಷಕರು ಬೆಳಗಾಂವ ಜಿಲ್ಲೆ ಇವರಿಗೆ ಸಲ್ಲಿಸಿ ಜಪ್ತು ಮಾಡಿದ ವಸ್ತುಗಳನ್ನು ಅಬಕಾರಿ ನಿರೀಕ್ಷಕರು ರಾಮದುರ್ಗ ವಲಯ ಇವರಿಗೆ ಹಸ್ತಾಂತರಿಸಲು 26-12-2000 ರಂದು ಅನುಮತಿ ಪಡೆದಿರುತ್ತಾರೆ.

ಶ್ರೀ ಜಿ.ಪಿ. ಬೀಳಗಿ ಇವರ ಪರವಾಗಿ ಅವರ ಸ್ಪೇಶಲ್ ಪಾವರ್ ಆಫ್ ಅಟಾರ್ನಿ ಹೋಲ್ಡರ್ ಆದ ಶ್ರೀ ಬಿ.ಟಿ. ಕುರಹಟ್ಟಿ ಇವರು 14-3-2001 ರಂದು ಪ್ರಾಧಿಕಾರಕ್ಕೆ ಒಂದು ಪತ್ರವನ್ನು ಸಲ್ಲಿಸಿ ದಂಡವಿಧಿಸುವುದರ ಮೂಲಕ ಪ್ರಕರಣವನ್ನು ಇತ್ಯರ್ಥಪಡಿಸಲು ಕೋರಿರುತ್ತಾರೆ. ಪಾವರ್ ಆಫ್ ಅಟಾರ್ನಿ ಹಾಗೂ ವಾಹನದ ಆರ್. ಸಿ. ಪುಸ್ತಕದ ಛಾಯಾ ಪ್ರತಿಗಳನ್ನು ಲಗತ್ತಿಸಿರುತ್ತಾರೆ. ವಾಹನ ಮಾಲೀಕರು ಸ್ವತಃ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ. ವಾಹನದ ಮೂಲ ದಾಖಲಾತಿಗಳನ್ನು ಹಾಗೂ ತಮ್ಮ ವಿಳಾಸದ ಪುರಾವೆಯಾಗಿ ಯಾವುದೆ ದಾಖಲಾತಿಗಳನ್ನು ಸಲ್ಲಿಸಿರುವುದಿಲ್ಲ. ಅರ್ಜಿಯಲ್ಲಿ ಮದ್ಯವನ್ನು ಕ್ಲೇಮು ಮಾಡಿರುವುದಿಲ್ಲ. ಕಲಂ 45 ಅಡಿಯಲ್ಲಿ ಇಂತಹ ಗುನ್ಹೆಗಳನ್ನು ಇತ್ಯರ್ಥಪಡಿಸಲು ಅವಕಾಶವಿರುವುದಿಲ್ಲ.

ಜಪ್ತು ಮಾಡಿದ ವಾಹನ ಹಾಗೂ ಮದ್ಯವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದಾಗಿ ಕಲಂ 43ಬಿ ಅಡಿಯಲ್ಲಿ ವಾಹನ ಮಾಲೀಕರಾದ ಶ್ರೀ ಗೋವಿಂದರಾಜ ಪರಮೇಶ್ವರ ಬೀಳಗಿ, ಶ್ರೀನಿಧಿ, ಒಂದನೇ ಕ್ರಾಸ, ದೇಶಪಾಂಡೆ ನಗರ ಹುಬ್ಬಳ್ಳಿ ಇವರಿಗೆ ದಿನಾಂಕ: 5-3-2001 ರಂದು ನೋಟಿಸು ನೀಡಲಾಯಿತು. ವಾಹನ ಮಾಲೀಕರು ಸದರಿ ನೋಟಿಸಿಗೆ ಉತ್ತರ ನೀಡಿರುವುದಿಲ್ಲ.

ಅಬಕಾರಿ ನಿರೀಕ್ಷಕರು, ರಾಮದುರ್ಗ ವಲಯ ಇವರು ತಮ್ಮ 16-2-2002 ದಿನಾಂಕದ ಪತ್ರದೊಂದಿಗೆ ಪ್ರಕರಣದ ದಾಖಲಾತಿಗಳ ಝರಾಕ್ಸ ಪ್ರತಿಗಳನ್ನು ಲಗತ್ತಿಸಿದ್ದಾರೆ. ಲಗತ್ತಿಸಿದ ರಾಸಾಯನಿಕ ವಿಶ್ಲೇಷಣಾ ವರದಿಯನ್ನು ಗಮನಿಸಲು ಮಾದರಿಗಳಲ್ಲಿ ಅಲ್ಕೋಹಾಲ ಇದ್ದು ಮದ್ಯಸಾರದ ಅಂಶವು 27.4 ಯು.ಪಿ. ಮತ್ತು 26.7 ಯು.ಪಿ. ಇದೆ ಎಂದು ಹಾಗೂ ಅವು ಮಾನವ ಸೇವನೆಗೆ ಯಾಗ್ಯವಾಗಿರುತ್ತವೆಂದು ತಜ್ಞರು ಅಭಿಪ್ರಾಯಪಟ್ಟಿರುವುದು ಕಂಡುಬರುತ್ತದೆ. ಪ್ರಕರಣದ ಹಿನ್ನೆಲೆಯನ್ನು ಗಮನಿಸಲು ಜಪ್ತು ಮಾಡಿದ ಮದ್ಯವು ಲೈಸನ್ಸ್ ಇಲ್ಲದೇ ಸರ್ಕಾರದ ಮೇಲ್ವಿಚಾರಣೆ ಇಲ್ಲದೇ ತಯಾರಾಗಿರುವುದರಿಂದ ಅದರ ಗುಣಮಟ್ಟದ ಬಗ್ಗೆ ಸಂಶಯ ಮೂಡುತ್ತದೆ. ಅಲ್ಲದೇ ಕರ್ನಾಟಕ ಅಬಕಾರಿ (ರೆಗ್ಯೂಲೇಶನ್ ಆಫ್ ಈಲ್ಡ್, ಪ್ರೊಡೆಕ್ಷನ್ ಮತ್ತು ವೇಸ್ಟೇಜ್ ಆಫ್ ವೈನ್, ಬೀರ ಮತ್ತು ಲೀಕರ್ಸ್) ನಿಯಮಗಳು 1998 ರಂತೆ ಭಾರತೀಯ ತಯಾರಿಕೆಯ ಮದ್ಯದಲ್ಲಿ ಇರಬೇಕಾದ ಅಲ್ಕೋಹಾಲ ಅಂಶವು 25 ಯು.ಪಿ. ಇದ್ದು ಇದಕ್ಕಿಂತ ಅರ್ಧ ಯು.ಪಿ. ಹೆಚ್ಚು ಅಥವಾ ಕಡಿಮೆ ಇರಲು ಅವಕಾಶವಿರುತ್ತದೆ. ಆದರೆ ಪ್ರಸ್ತುತ ಮದ್ಯದ ತೀಕ್ಷಣತೆಯು ಈ ನಿಯಮದಲ್ಲಿರುವ ಮಿತಿಯನ್ನು ದಾಟಿರುತ್ತದೆ. ಸಾರ್ವಜನಿಕರ ಆರೋಗ್ಯದ ಹಿತದೃಷ್ಟಿಯಿಂದ ಇಂತಹ ಮದ್ಯವನ್ನು ಸೇವನೆಗೆ ನೀಡುವುದು ಸೂಕ್ತವೆನಿಸುವುದಿಲ್ಲ.

ತನಿಖಾಧಿಕಾರಿಯವರಾದ ಅಬಕಾರಿ ಉಪ ನಿರೀಕ್ಷಕರು (ಜಾರಿ ಮತ್ತು ತನಿಖೆ) ರಾಮದುರ್ಗ ಇವರು 30-11-2005 ರ ಪತ್ರದೊಡನೆ ಕೆಳಕಂಡ ದಾಖಲಾತಿಗಳ ಧೃಡೀಕೃತ ಪ್ರತಿಗಳನ್ನು ಜೆ.ಎಂ.ಎಫ್.ಸಿ. ನ್ಯಾಯಾಲಯದಿಂದ ಪಡೆದು ಲಗತ್ತಿಸಿದ್ದು ವಾಹನ ಹಾಗೂ ಮದ್ಯವನ್ನು ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ: ನ್ಯಾಯಾಲಯದ ಆರ್ಡರ ಶೀಟ, ಆರೋಪಣಾ ಪತ್ರ, ಪ್ರ.ವ.ವ., ಖೈದಿಗಳ ಶೋಧನೆ ತಕ್ಷೀರು, ಜಾಮೀನು ಪತ್ರಗಳು, ಸಾಕ್ಷಿದಾರರ ಹೇಳಿಕೆಗಳು, ನ್ಯಾಯಾಲಯದಲ್ಲಿ ಮಾಡಿಸಲಾದ ಸಾಕ್ಷಿಗಳು, ಪಂಚನಾಮಾ, ಫಿರ್ಯಾದಿ, ತಜ್ಞರ ವರದಿ.

ಪ್ರಕರಣದಲ್ಲಿರುವ ದಾಖಲಾತಿಗಳನ್ನು ಗಮನಿಸಲಾಗಿ ಮೆಟಡೋರ ಟೆಂಪೋ ಸಂಖ್ಯೆ: ಕೆಎ-34-1175 ವಾಹನದಲ್ಲಿ ಕರ ಕೊಡದ ಮದ್ಯ ತುಂಬಿದ 44 ರಟ್ಟಿನ ಪೆಟ್ಟಿಗೆಗಳನ್ನು ಲೈಸನ್ಸ್ ಅಥವಾ ಪರಮಿಟ್ ಇಲ್ಲದೆ ಸಾಗಾಣಿಕೆ ಮಾಡುತ್ತಿದ್ದಾಗ ಫಿರ್ಯಾದಿದಾರರು 24-12-2000ರಂದು ಜಪ್ತು ಮಾಡಿದ್ದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ. ಜಪ್ತು ಮಾಡಿ ಐದು ವರ್ಷ ಸಮಯ ಕಳೆದರೂ ವಾಹನ ಮತ್ತು ಮದ್ಯವನ್ನು ತಮ್ಮದೆಂದು ಹೇಳಿ ಯಾರೂ ಈ ಪ್ರಾಧಿಕಾರದ ಮುಂದೆ ಕ್ಲೇಮು ಮಾಡಿರುವುದಿಲ್ಲ. ಕಲಂ 40 ರಂತೆ ವಾಹನ ಮಾಲೀಕರೇ ತಮ್ಮ ಮುಗ್ಧತೆಯನ್ನು ಮತ್ತು ವಾಹನವನ್ನು ಕರಕೊಡದ ಮದ್ಯ ಅಕ್ರಮ ಸಾಗಾಣಿಕೆಗೆ ಉಪಯೋಗಿಸುವುದನ್ನು ತಡೆಯಲು ಮುಂಜಾಗ್ರತೆ ತೆಗೆದುಕೊಂಡಿದ್ದರೆಂದು ಈ ಪ್ರಾಧಿಕಾರದ ಮುಂದೆ ಸಾಬೀತುಪಡಿಸಬೇಕಾಗುತ್ತದೆ. ಜಪ್ತು ಮಾಡಿದ ಸ್ವತ್ತುಗಳು ಕಲಂ 43 ರಂತೆ ಮುಟ್ಟುಗೋಲು ಹಾಕಿಕೊಳ್ಳಬೇಕಾದ ವಸ್ತುಗಳಾಗಿರುತ್ತವೆ.

ವಾಹನ ಮಾಲೀಕರು ಈ ಪ್ರಕರಣದಲ್ಲಿ ಹಾಜರಾಗಿ ಜಪ್ತು ಮಾಡಿದ ವಸ್ತುಗಳನ್ನು ಇಲ್ಲಿಯವರೆಗೆ ಕ್ಲೇಮು ಮಾಡದೇ ಇರುವುದನ್ನು ಗಮನಿಸಲು ವಾಹನ ಮಾಲೀಕರು ಶಾಮೀಲಾಗಿಯೇ ವಾಹನದ ಮೇಲೆ ಮದ್ಯದ ಸಾಗಣೆ ನಡೆಸಿರುತ್ತಾರೆಂದು ನಂಬಬೇಕಾಗುತ್ತದೆ. ಪ್ರಕರಣವನ್ನು ಇಲಾಖಾ ವತಿಯಿಂದ ಇತ್ಯರ್ಥಪಡಿಸಲು 14-3-2001ರಂದು ಸಲ್ಲಿಸಿದ ಅರ್ಜಿಯನ್ನು ತಿರಸ್ಕರಿಸಿದೆ.

ಆದ್ದರಿಂದ ಈ ಕೆಳಕಂಡ ಆದೇಶ:

**ಸಂಖ್ಯೆ: ಇಎಕ್ಸ್‌ಇ / ಡಿಟಿಸಿಆರ್/ 228/2000-01/ ದಿನಾಂಕ: 26ನೇ ಜುಲೈ 2006**

ಜಿ.ಎಂ. ವಾಲಿ, ಅಧೀಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ವಿಚಕ್ಷಣ ದಳ, ಬೆಳಗಾಂವ ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆಯ ಕಲಂ 43ಬಿ ಅಡಿಯಲ್ಲಿ ವಿಧಿಸಿದ ಕ್ರಮವನ್ನು ಅನುಸರಿಸಿದ ನಂತರ ಕಲಂ 43ಎ ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಮೆಟಡೋರ ಟೆಂಪೋ ಸಂಖ್ಯೆ: ಕೆಎ-34-1175 ಹಾಗೂ 44 ಪೆಟ್ಟಿಗೆ ಮದ್ಯ (ಶ್ಯಾಂಪಲ್ ಹೊರತುಪಡಿಸಿ) ಇವುಗಳನ್ನು ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಅಬಕಾರಿ ಆಯುಕ್ತರ ಪತ್ರ ಸಂಖ್ಯೆ: ಇಸಿಸಿ/ 73/ಸಿ ಆರ್‌ಎಂ/04 ದಿನಾಂಕ: 12-9-2005 ರಲ್ಲಿ ವಿಧಿಸಿದ ಕ್ರಮವನ್ನು ಅನುಸರಿಸಿ ಮದ್ಯವನ್ನು ನಾಶಪಡಿಸಿ ಖಾಲಿ ಬಾಟ್ಲಿಗಳನ್ನು ಹರಾಜು ಮಾಡಲು ಅಬಕಾರಿ ಉಪ ಅಧೀಕ್ಷಕರು (ಜಾರಿ ಮತ್ತು ತನಿಖೆ) ರಾಮದುರ್ಗ ಉಪ ವಿಭಾಗ ಇವರಿಗೆ ಆದೇಶಿಸಿದೆ.

ಈ ಆದೇಶವನ್ನು ಇಂದು ದಿನಾಂಕ: 26-7-2006ರಂದು ಉಕ್ತಲೇಖನ ಕೊಟ್ಟು, ಕಂಪ್ಯೂಟರ್‌ನಲ್ಲಿ ಬೆರಳಚ್ಚು ಮಾಡಿಸಿ, ಪ್ರತಿಯನ್ನು ತಿದ್ದಿ ತೆರೆದ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಅಮಲಿನಲ್ಲಿ ಬರುವದು.

ಅಧೀಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು,

ಪಿ.ಆರ್. 1198 ವಿಚಕ್ಷಣ ದಳ ಬೆಳಗಾಂವ ಜಿಲ್ಲೆ, ಬೆಳಗಾಂವ.

**KARNATAKA POWER TRANSMISSION CORPORATION LIMITED**
**Executive Engineer Ele., Major Works Division, KPTCL.,**
**Gadag Dist., Hubli.**
**No. 605/EEE/MWD/H/2128-32 dated : 5th July 2006**
**NOTIFICATION**

Karnataka power Transmission Corporation limited has formulated scheme under section 28 and clause (e) of the act 18 of the electricity supply act 1948 and the scheme is hereby published in pursuance of section 29 (2)of the said act. This notification is issued for the information of the concerned person. Particulars of the scheme are as here under.

**Name of the work :** Proposed 110 KV D.C. line from 33/110 KV Pooling Station (Wind power project) of M/S Suzlon Energy Ltd. at Bagevadi in Gadag Dist., to proposed 110/110 KV Switcing Station at Guttal in Haveri Dist. at a distance of 37.625 Kms. Using Lynx ACSR conductor.

**Salient Features :** For evacuation of 55 MW of Wind Power from the wind power project, so as to improve the voltage conduction in and around Guttal area in Haveri Dist., to meet the further load growth in the area.

**Areas Passing through :** Village limits of Guttal, Negalur, Belvigi, Nirlagi, Mevundi, Koganur, Goveniakoppa, Vadivi, Tarikuppa, Mallikarjuna pura, Jalavadi and Bagevadi.

**Approximate Cost :** 791.00 Lakhs KPTCL shall hare and exercise all power witch the telegraphic authorities posses under part III of the telegraphic Act 1985 (18 of 1985) for implementation of the above said scheme. Any objection regarding the above scheme shall be sent to the under signed within one month from the date of publication of this notification for KPTCL pursuance.

Executive Engineer Ele.,
PD.No.-96 Major Works Division, KPTCL.,
Gadag Dist., Hubli.

**ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ**

**ಕಾರ್ಯನಿರ್ವಾಹಕ ಇಂಜಿನಿಯರ್(ವಿ) ಬೃಹತ್‌ಕಾಮಗಾರಿ ವಿಭಾಗ, ಕವಿಪ್ರನಿನಿ, ಕೋತಿತೋಪು ರಸ್ತೆ, ತುಮಕೂರು.**

**ಸಂಖ್ಯೆ : ಕಾನಿಇಂ/ಬೃಕಾವಿ/ತು/ 2006-07/1584-88 ದಿನಾಂಕ : 13ನೇ ಜುಲೈ 2006**

**ಪ್ರಕಟಣೆ**

ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು 1948ರ ವಿದ್ಯುಛಕ್ತಿ ಸರಬರಾಜು ಅಧಿನಿಯಮದ ಪ್ರಕರಣ 28(ಎ) ಅನ್ವಯ ಈ ಕೆಳಗೆ ತಿಳಿಸಿರುವ ಯೋಜನೆಯೊಂದನ್ನು ರೂಪಿಸಿದೆ ಮತ್ತು ಸದರಿ ಯೋಜನೆಯನ್ನು ಹಾಗೂ ಸದರಿ ಯೋಜನೆಯನ್ನು ಪ್ರಕರಣ 29(11)ರ ಅನ್ವಯ ಈ ಮೂಲಕ ಪ್ರಕಟಿಸಲಾಗಿದೆ. ಈ ಪ್ರಕಟಣೆಯನ್ನು ಲೈಸೆನ್ಸ್‌ದಾರರು ಮತ್ತು ಸಂಬಂಧಪಟ್ಟ ಇತರೆ ವ್ಯಕ್ತಿಗಳ ತಿಳುವಳಿಕೆಗಾಗಿ ನೀಡಲಾಗಿದೆ. ಯೋಜನೆಯ ವಿವರಗಳು ಈ ಮುಂದಿನಂತಿರುತ್ತವೆ.

**ಯೋಜನೆಯ ವಿವರ :** ರೂ 1676 ಲಕ್ಷ ವೆಚ್ಚದಲ್ಲಿ ಚಿಕ್ಕನಾಯಕನ ಹಳ್ಳಿ ತಾಲ್ಲೂಕು, ತುಮಕೂರು ಜಿಲ್ಲೆ ಹೊಯ್ಸಳಕಟ್ಟೆಯಲ್ಲಿ ನಿರ್ಮಿಸಲಾಗುವ 220/33 ಕೆ.ವಿ. ಹೊಯ್ಸಳಕಟ್ಟೆ ವಿದ್ಯುತ್ ಉಪ ಕೇಂದ್ರದಿಂದ ಹಾಲಿ ಇರುವ 220/66 ಕೆ.ವಿ. ಹಿರಿಯೂರು ಉಪ ಕೇಂದ್ರದವರೆಗೆ 220 ಕೆ.ವಿ. ಒತ್ತಡದ ವಿದ್ಯುತ್ ಮಾರ್ಗವನ್ನು ಸ್ವಯಂ ನಿರ್ಮಾಣದ ಕಾಮಗಾರಿಯಲ್ಲಿ ಕೈಗೊಳ್ಳಲಾಗುವುದು.

**ಹಾದು ಹೋಗುವ ಪ್ರದೇಶಗಳು:** ಚಿತ್ರದುರ್ಗ ಜಿಲ್ಲೆ, ಹಿರಿಯೂರು ತಾಲ್ಲೂಕಿನ ಹೊಸಹಟ್ಟಿ, ಗೊಲ್ಲ ರಟ್ಟಿ, ಹುಚ್ಚವ್ವನಹಳ್ಳಿ, ಸಿಗೇಹಟ್ಟಿ, ದೊಡ್ಡಘಟ್ಟ, ಪರಮೇನಹಳ್ಳಿ, ಇದ್ಲ ನಾಗೇನಹಳ್ಳಿ, ಹಿಂಡಸಕಟ್ಟೆ, ತಲವಾರಂಗಟ್ಟೆ, ಹಂದಿಗನಾಡು, ಬೈರಮಡು, ಶೇಷಪ್ಪನಹಳ್ಳಿ, ಚಿ.ನಾ.ಹಳ್ಳಿ ತಾಲ್ಲೂಕು, ತುಮಕೂರು ಜಿಲ್ಲೆ ದಸೂಡಿ, ಗೊಲ್ಲರಹಳ್ಳಿ, ಉಮ್ಲನಯಕ್ಕನಹಟ್ಟಿ, ದಬ್ಬೇಕುಂಟೆ, ನುಲೆನೂರು. ಪ್ರದೇಶದ ಸರಹದ್ದಿನಲ್ಲಿ ಹಾದು ಹೋಗುವ ಮಾರ್ಗದ ಒಟ್ಟು ಉದ್ದ 49.16ಕಿ.ಮೀ

ಕ.ವಿ.ಪ್ರ.ನಿ.ನಿ. ಮೇಲೆ ತಿಳಿಸಿರುವ ಯೋಜನೆಗಳನ್ನು ಕಾರ್ಯಗತಗೊಳಿಸಲು 1885 ರ ಭಾರತೀಯ ಟೆಲಿಗ್ರಾಫ್ ಅಧಿನಿಯಮ ಭಾಗ-111 ರ (ಕೇಂದ್ರ ಕಾಯ್ದೆ 1886ರ 13 ಅನ್ವಯ) ಅಧಿನಿಯಮದನ್ವಯ ಎಲ್ಲಾ ಅಧಿಕಾರಗಳನ್ನು ಹೊಂದಿರುತ್ತದೆ ಹಾಗೂ ಚಲಾಯಿಸುತ್ತದೆ.

ಸದರಿ ಯೋಜನೆಗಳಿಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ನಿಗಮದ ಪರಿಗಣನೆಗಾಗಿ ಆಕ್ಷೇಪಣೆಗಳನ್ನು ಈ ಪ್ರಕಟಣೆ ಪ್ರಕಟವಾದ 60 ದಿನಗಳ ಒಳಗಾಗಿ ಕಾರ್ಯನಿರ್ವಾಹಕ ಅಭಿಯಂತರರು (ವಿ) ಬೃಹತ್ ಕಾಮಗಾರಿ ವಿಭಾಗ, ಕವಿಪ್ರನಿನಿ, ಕೋತಿತೋಪು, ತುಮಕೂರು-02 ಇವರಿಗೆ ಕಳುಹಿಸುವುದು.

ಕಾರ್ಯ ನಿರ್ವಾಹಕ ಇಂಜಿನಿಯರ್ (ವಿ),
ಪಿ.ಡಿ. 97 ಬೃಹತ್‌ಕಾಮಗಾರಿ ವಿಭಾಗ, ಕವಿಪ್ರನಿನಿ, ತುಮಕೂರು.

**ಪೊಲೀಸ್ ಕಮೀಷನರ್‌ರವರ ಕಛೇರಿ, ನಂ.1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ.**

**ನಂ/159/ ಸಂ.ವಿ/ಸಿ.ಓ.ಪಿ/2006. ದಿನಾಂಕ 30 ನೇ ಜೂನ್ 2006.**

**ಅಧಿಸೂಚನೆ**

ಬೆಂಗಳೂರು ನಗರದ ಯಶವಂತಪುರ ಸಂಚಾರ ಪೊಲೀಸ್ ಠಾಣೆ ಸರಹದ್ದಿಗೆ ಸೇರಿದ ಹೆಚ್.ಎಂ.ಟಿ. ಮುಖ್ಯ ರಸ್ತೆಯಲ್ಲಿರುವ ಗೋಕುಲ ರೈಲ್ವೆ ಗೇಟಿಗೆ ಬೆಂಗಳೂರು ಮಹಾನಗರ ಪಾಲಿಕೆ ಮತ್ತು ರೈಲ್ವೆ ಇಲಾಖೆಯವರು ಸೇರಿ ಮೇಲು ಸೇತುವೆ ನಿರ್ಮಾಣ ಮಾಡಲು ಉದ್ದೇಶಿಸಿ ಕಾಮಗಾರಿ ಪ್ರಾರಂಭಗೊಳ್ಳಲಿದ್ದು ಈ ಮೇಲು ಸೇತುವೆ ಕೆಲಸ ಸುಸೂತ್ರವಾಗಿ ನಡೆಯಲು ಹಾಲಿ ಇರುವ ಸಂಚಾರ ವ್ಯವಸ್ಥೆಯಲ್ಲಿ ಮಾರ್ಗ ಬದಲಾವಣೆ ಮಾಡಬೇಕೆಂದು ಬೆಂಗಳೂರು ಮಹಾನಗರ ಪಾಲಿಕೆ ಮತ್ತು ರೈಲ್ವೇ ಇಲಾಖೆಯವರು ಕೋರಿರುತ್ತಾರೆ. ಆದ್ದರಿಂದ ಹೆಚ್. ಎಂ. ಟಿ. ಮುಖ್ಯ ರಸ್ತೆಯಲ್ಲಿ ಬಿ.ಇ.ಎಲ್. ರಿಂಗ್ ರಸ್ತೆ ಜಂಕ್ಷನ್ ಕಡೆಯಿಂದ ಮತ್ತಿಕೆರೆ ಬಸ್ ನಿಲ್ದಾಣದ ಕಡೆಗೆ ಹಾಗೂ ಮತ್ತಿಕೆರೆ ಬಸ್ ನಿಲ್ದಾಣದ ಕಡೆಯಿಂದ ಬಿ.ಇ.ಎಲ್. ರಿಂಗ್ ರಸ್ತೆ ಕಡೆಗೆ ಸಂಚರಿಸುವ ಎಲ್ಲಾ ಮಾದರಿಯ ವಾಹನಗಳ ಸಂಚಾರವನ್ನು ತಾತ್ಕಾಲಿಕವಾಗಿ ನಿಷೇದ ಮಾಡಿ ಮಾರ್ಗ ಬದಲಾವಣೆ ಮಾಡುವುದು ಅನಿವಾರ್ಯವಾಗಿರುತ್ತದೆ.

ಬೆಂಗಳೂರು ನಗರದ ಹೆಚ್.ಎಂ.ಟಿ. ಮುಖ್ಯ ರಸ್ತೆಯಲ್ಲಿ ವಿದ್ಯಾರಣ್ಯಪುರದ ಕಡೆಯಿಂದ ಗೋಕುಲ ಮತ್ತಿಕೆರೆ ಮಾರ್ಗವಾಗಿ ಸಂಚರಿಸುವ ಬಿ.ಎಂ.ಟಿ.ಸಿ ಬಸ್ಸುಗಳು ಬಿ.ಇ.ಎಲ್. ಸಿಗ್ನಲ್‌ಗೆ ಮೊದಲು ಸುಮಾರು 100 ಅಡಿಗಳಷ್ಟು ಹಿಂದೆ ಇರುವ ರಸ್ತೆಯಲ್ಲಿ ಎಡ ತಿರುವು ಪಡೆದು ರಾಷ್ಟ್ರಕವಿ ಕುವೆಂಪು ವೃತ್ತದಲ್ಲಿ ಬಲ ತಿರುವು ಪಡೆದು ಹೊಸ ಬಿ.ಇ.ಎಲ್. ರಸ್ತೆ ಮಾರ್ಗವಾಗಿ ಮುಂದೆ ಹೋಗಬೇಕಾದ ಸ್ಥಳಗಳಿಗೆ ಹೋಗಬಹುದು, ಹಾಗೂ ಲಘು ವಾಹನಗಳು ಮತ್ತು ದ್ವಿಚಕ್ರ ವಾಹನಗಳು ಹೆಚ್.ಎಂ.ಟಿ. ಮುಖ್ಯ ರಸ್ತೆಯಲ್ಲಿ ಎಂ.ಎಸ್. ರಾಮಯ್ಯ ಮೆಮೋರಿಯಲ್ ಹಾಲ್ ಪಕ್ಕದ ರಸ್ತೆಯಲ್ಲಿ ಬಲತಿರುವು ಪಡೆದು ನೌಕೀಸ್ ಸ್ಕೂಲ್ ಬಳಿ ಬಲ ತಿರುವುಪಡೆದು ಮುಂದೆ ಹೋಗಿ 1ನೇ ಕ್ರಾಸ್ ರಸ್ತೆಯಲ್ಲಿ (ಮುನಿಸ್ವಾಮಪ್ಪ ಬಡಾವಣೆ ಮುಖ್ಯ ರಸ್ತೆ) ಎಡ ತಿರುವು ಪಡೆದು ಮುಂದೆ ಹೋಗಿ ಮುತ್ಯಾಲನಗರ ರೈಲ್ವೇಗೇಟ್ ಬಳಿ ಎಡ ತಿರುವು ಪಡೆದು ಜೆ.ಪಿ.ಪಾರ್ಕ್ ರಸ್ತೆ, ಮೋಹನ್‌ಕುಮಾರ್ ನಗರ ರಸ್ತೆ ಮಾರ್ಗವಾಗಿ ಮುಂದೆ ಹೋಗಬಹುದಾದ ಸ್ಥಳಗಳಿಗೆ ಹೋಗಬಹುದು.

ಯಶವಂತಪುರ ಕಡೆಯಿಂದ ಬಿ.ಇ.ಎಲ್. ಹಾಗು ವ್ವಿದ್ಯಾರಣ್ಯಪುರ ಕಡೆಗೆ ಸಂಚರಿಸುವ ಎಲ್ಲಾ ಮಾದರಿ ವಾಹನಗಳು ಹೆಚ್.ಎಂ.ಟಿ. ಮುಖ್ಯ ರಸ್ತೆ, ಮತ್ತಿಕೆರೆ ಬಸ್ ನಿಲ್ದಾಣದಲ್ಲಿ ಎಡ ತಿರುವು ಪಡೆದು, ಮೋಹನ್ ಕುಮಾರ್ ನಗರ ರಸ್ತೆ ಮಾರ್ಗವಾಗಿ ಮುಂದೆ ಹೋಗಿ ಚೌಡೇಶ್ವರಿ ಬಸ್ ನಿಲ್ದಾಣದ ಬಳಿ ಬಲತಿರುವು ಪಡೆದು ಜೆ.ಪಿ.ಪಾರ್ಕ್ ರಸ್ತೆ ಮುತ್ಯಾಲನಗರ ರಸ್ತೆ ಮಾರ್ಗವಾಗಿ ರಿಂಗ್ ರಸ್ತೆ ತಲುಪಿ ಮುಂದೆ ಹೋಗಬಹುದಾದ ಸ್ಥಳಗಳಿಗೆ ಹೋಗಬಹುದು.

ಆದ್ದರಿಂದ ಕಲಂ 115 ಮೋಟಾರು ವಾಹನ ಕಾಯ್ದೆ 1988 ಹಾಗು ಕಲಂ.3, ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರ ಪ್ರಕಾರ ಬೆಂಗಳೂರು ನಗರದ ಪೊಲೀಸ್ ಕಮೀಷನರ್ ಎನ್. ಅಚ್ಯುತರಾವ್ ಆದ ನಾನು ಈ ಕೆಳಕಂಡ ಸಂಚಾರ ನಿರ್ಭಂಧನಗಳನ್ನು ಆದೇಶಿಸಿರುತ್ತೇನೆ.

1. ಹೆಚ್.ಎಂ.ಟಿ. ಮುಖ್ಯ ರಸ್ತೆಯಲ್ಲಿ ಬಿ.ಇ.ಎಲ್. ರಿಂಗ್ ರಸ್ತೆ ಜಂಕ್ಷನ್ ಕಡೆಯಿಂದ ಮತ್ತಿಕೆರೆ ಬಸ್ ನಿಲ್ದಾಣದ ಕಡೆಗೆ ಹೋಗುವ ಎಲ್ಲಾ ಮಾದರಿಯ ವಾಹನಗಳ ಸಂಚಾರವನ್ನು ನಿರ್ಭಂದಿಸಿರುತ್ತೇನೆ.

2. ಮತ್ತಿಕೆರೆ ಬಸ್ ನಿಲ್ದಾಣದ ಕಡೆಯಿಂದ ಬಿ.ಇ.ಎಲ್. ರಿಂಗ್ ರಸ್ತೆ ಕಡೆಗೆ ಸಂಚರಿಸುವ ಎಲ್ಲಾ ಮಾದರಿಯ ವಾಹನಗಳ ಸಂಚಾರವನ್ನು ನಿರ್ಭಂದಿಸಿರುತ್ತೇನೆ.

3. ಮುತ್ಯಾಲನಗರ ಮುಖ್ಯ ರಸ್ತೆಯಲ್ಲಿ ರಿಂಗ್ ರಸ್ತೆ ಜಂಕ್ಷನ್‌ನಿಂದ ಮುತ್ಯಾಲನಗರ ರೈಲ್ವೇಗೇಟ್‌ವರೆಗೆ ದಕ್ಷಿಣದಿಂದ ಉತ್ತರದ ಕಡೆಗೆ ಎಲ್ಲಾ ಮಾದರಿಯ ವಾಹನಗಳ ಸಂಚಾರವನ್ನು ನಿರ್ಭಂದಿಸಿರುತ್ತೇನೆ.

4. ಮುತ್ಯಾಲನಗರ ರೈಲ್ವೇಗೇಟ್ ಬಳಿಯಿಂದ ನೌಕೀಸ್ ಸ್ಕೂಲ್ ಕಡೆಗೆ ಹೋಗುವ ರಸ್ತೆಯಲ್ಲಿ ಮುತ್ಯಾಲನಗರ ರೈಲ್ವೇಗೇಟ್ ಕಡೆಯಿಂದ ಹೆಚ್.ಎಂ.ಟಿ. ಮುಖ್ಯ ರಸ್ತೆ ಕಡೆಗೆ ಹೋಗುವ ಎಲ್ಲಾ ಮಾದರಿಯ ವಾಹನಗಳ ಸಂಚಾರವನ್ನು ನಿರ್ಭಂದಿಸಿರುತ್ತೇನೆ.

ಈ ಆದೇಶವು ಗೋಕುಲ ರೈಲ್ವೇಗೇಟ್ ಬಳಿ ನಡೆಯುವ ಮೇಲುಸೇತುವೆ ಕಾಮಗಾರಿ ಪೂರ್ಣಗೊಳ್ಳುವವರೆಗೆ ಜಾರಿಯಲ್ಲಿರುತ್ತದೆ.

ಅಂತೆಯೇ 1988ನೇ ಮೋಟಾರು ವಾಹನ ಕಾಯಿದೆ, ಕಲಂ,116 ಹಾಗು 1960 ನೇ ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ ಕಲಂ 4ರಲ್ಲಿ ಪ್ರದತ್ತವಾದ ಅಧಿಕಾರ ಚಲಾಯಿಸಿ ಮೇಲ್ಕಂಡ ನಿರ್ಬಂಧವನ್ನು ಜಾರಿಗೊಳಿಸಲು ಅಗತ್ಯವಾದ ಸೂಚನಾ ಫಲಕಗಳನ್ನು ಅಗತ್ಯ ಸ್ಥಳಗಳಲ್ಲಿ ಹಾಕಿಸಲು ಸ್ಥಳೀಯ ಪೊಲೀಸ್‌ನವರಿಗೆ ಆದೇಶ ನೀಡಿರುತ್ತೇನೆ.

ಈ ಆದೇಶವು ದಿನಾಂಕ: 30.ಜೂನ್.2006ರಿಂದ ನನ್ನ ಸಹಿ ಹಾಗೂ ಮುದ್ರೆಯೊಂದಿಗೆ ಈ ಆದೇಶವನ್ನು ಹೊರಡಿಸಿರುತ್ತೇನೆ.

**ಎನ್. ಅಚ್ಯುತರಾವ್**

ಪಿ.ಆರ್. 1240 ಪೊಲೀಸ್ ಕಮೀಷನರ್, ಬೆಂಗಳೂರು ನಗರ

**ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರುರವರ ಕಾರ್ಯಾಲಯದ ನಡುವಳಿಕೆಗಳು**

**ವಿಷಯ:** ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಯಲಹಂಕ ಹೋಬಳಿ, ರಾಮಚಂದ್ರಪುರ ವೃತ್ತ, ವಡೇರಹಳ್ಳಿ ಗ್ರಾಮದ ಸ.ನಂ. 36ರ ಸರ್ಕಾರಿ ಗೋಮಾಳ ಜಮೀನಿನಲ್ಲಿ ಹಿಂದು, ಮುಸ್ಲಿಂ, ಕ್ರೈಸ್ತ ಜನಾಂಗಗಳಿಗೆ ಪ್ರತ್ಯೇಕವಾಗಿ ಸ್ಮಶಾನಕ್ಕಾಗಿ ಜಮೀನು ಕಾಯ್ದಿರಿಸುವ ಬಗ್ಗೆ.

**ಉಲ್ಲೇಖ:** ತಹಶೀಲ್ದಾರ್, ಬೆಂಗಳೂರು ಉತ್ತರ (ಅಪರ) ತಾಲ್ಲೂಕುರವರ ಪತ್ರ ಸಂಖ್ಯೆ: ಎಲ್.ಎನ್.ಡಿ:ಸಿ.ಆರ್:313/05-06, ದಿನಾಂಕ: 3.1.2006.

**ಪ್ರಸ್ತಾವನೆ :**

ತಹಶೀಲ್ದಾರ್, ಬೆಂಗಳೂರು ಉತ್ತರ (ಅಪರ) ತಾಲ್ಲೂಕು ಇವರು ಉಲ್ಲೇಖದ ಪತ್ರದಲ್ಲಿ ಯಲಹಂಕ ಹೋಬಳಿ, ರಾಮಚಂದ್ರಪುರ ವೃತ್ತ, ವಡೇರಹಳ್ಳಿ ಗ್ರಾಮದ ಸ.ನಂ. 36ರ ಸರ್ಕಾರಿ ಗೋಮಾಳದಲ್ಲಿ ಹಿಂದು, ಮುಸ್ಲಿಂ, ಕ್ರೈಸ್ತ ಜನಾಂಗಗಳ ಸ್ಮಶಾನಕ್ಕಾಗಿ ಪ್ರತ್ಯೇಕವಾಗಿ ಜಮೀನು ಕಾಯ್ದಿರಿಸಲು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಈ ಕಛೇರಿಯಲ್ಲಿ ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದೆ. ಯಲಹಂಕ ಹೋಬಳಿ, ರಾಮಚಂದ್ರಪುರ ವೃತ್ತ, ವಡೇರಹಳ್ಳಿ ಗ್ರಾಮದ ಸ.ನಂ. 36ರ ಸರ್ಕಾರಿ ಗೋಮಾಳ ಜಮೀನಿನ ಒಟ್ಟು ವಿಸ್ತೀರ್ಣ 42.19 ಎಕರೆ: ಗಂಟೆ ಇದ್ದು, ಈ ಪೈಕಿ ಈ ತಹಲ್‌ವರೆಗೆ 38-39 ಎಕರೆ : ಗುಂಟೆ ವಿಲೇ ಮಾಡಿದೆ. ಈಗ 3.20 ಎಕರೆ:ಗುಂಟೆ ಮಾತ್ರ ಉಳಿದಿರುತ್ತದೆ.

ಈ ಜಮೀನಿನಲ್ಲಿ ಹಿಂದು, ಮುಸ್ಲಿಂ, ಕ್ರೈಸ್ತ ಜನಾಂಗಕ್ಕೆ ಸ್ಮಶಾನಕ್ಕಾಗಿ ಕಾಯ್ದಿರಿಸುವುದು ಸೂಕ್ತವೆಂದು ಪರಿಗಣಿಸಿದ್ದು, ಕರ್ನಾಟಕ ಭೂ ಕಂದಾಯ ಅಧಿನಿಯಮ 1964 ಕಲಂ 71 ರಡಿ ಹಿಂದು ಜನಾಂಗದವರಿಗೆ 1.00 ಎಕರೆ ಮುಸ್ಲಿಂ ಜನಾಂಗದವರಿಗೆ 1.20 ಎಕರೆ:ಗುಂಟೆ ಹಾಗೂ ಕ್ರೈಸ್ತ ಜನಾಂಗದವರಿಗೆ 1.00 ಎಕರೆ ಜಮೀನನ್ನು ಸ್ಮಶಾನಕ್ಕಾಗಿ ಕಾಯ್ದಿರಿಸಲು ಸಲ್ಲಿಸಿರುವ ಪ್ರಸ್ತಾವನೆ ಸೂಕ್ತವಾಗಿದೆ ಎಂದು ಅಭಿಪ್ರಾಯಿಸಲಾಗಿದೆ.

**ಆದೇಶ**

**ನಂ. ಎಲ್. ಎನ್.ಡಿ(ಎನ್. ಎ)ಸಿ. ಆರ್ : 140/05-06 ದಿನಾಂಕ : 21ನೇ ಜುಲೈ 2006**

ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಯಲಹಂಕ ಹೋಬಳಿ, ರಾಮಚಂದ್ರಪುರ ವೃತ್ತ, ವಡೇರಹಳ್ಳಿ ಗ್ರಾಮದ ಸ.ನಂ. 36ರ ಸರ್ಕಾರಿ ಗೋಮಾಳದಲ್ಲಿ ಹಾಲಿ ಉಳಿದಿರುವ 3.20 ಎಕರೆ:ಗುಂಟೆ ಜಮೀನನ್ನು ಕರ್ನಾಟಕ ಭೂ ಕಂದಾಯ ನಿಯಮ 1964 ಕಲಂ 71 ರಡಿ ಹಿಂದು ಜನಾಂಗದವರಿಗೆ 1.00 ಎಕರೆ ಮುಸ್ಲಿಂ ಜನಾಂಗದವರಿಗೆ 1.20 ಎಕರೆ: ಗುಂಟೆ ಹಾಗೂ ಕ್ರೈಸ್ತ ಜನಾಂಗದವರಿಗೆ 1.00 ಎಕರೆ ಪ್ರದೇಶವನ್ನು ಸ್ಮಶಾನಕ್ಕಾಗಿ ಕಾಯ್ದಿರಿಸಿದೆ. ಮತ್ತು ಈ ಸಾರ್ವಜನಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಕಂದಾಯ ನಿಯಮಗಳು 1966 ರ ನಿಯಮ 97(4)ರ ಅಡಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ 3.20 ಎಕರೆ:ಗುಂಟೆ ವಿಸ್ತೀರ್ಣವನ್ನು ಗೋಮಾಳ ಲೆಕ್ಕದಿಂದ ತಗ್ಗಿಸಲು ಆದೇಶಿಸಲಾಗಿದೆ. ಸದರಿ ಸ್ಮಶಾನಕ್ಕಾಗಿ ಕಾಯ್ದಿರಿಸಲಾದ ಜಮೀನಿನ ಚಕ್ಕುಬಂದಿ ವಿವರ ಈ ಕೆಳಕಂಡಂತಿದೆ.

**ಷೆಡ್ಯೂಲ್ (ಚಕ್ಕುಬಂದಿ)**

| | ಹಿಂದು ಜನಾಂಗದವರಿಗೆ 1.00 ಎಕರೆ ಜಮೀನು | ಕ್ರೈಸ್ತ ಜನಾಂದವರಿಗೆ 1.00 ಎಕರೆ ಜಮೀನು | ಮುಸ್ಲಿಂ ಜನಾಂಗದವರಿಗೆ 1.20 ಎಕರೆ ಜಮೀನು |
|---|---|---|---|
| ಪೂರ್ವ : | ದೊಡ್ಡಬೆಟ್ಟಹಳ್ಳಿ ಗಡಿ | ಹಿಂದುಗಳ ಸ್ಮಶಾನದ 1.00ಎಕರೆ | ಕ್ರೈಸ್ತ ಜನಾಂಗದ ಸ್ಮಶಾನದ 1.00 ಎಕರೆ |

| | | | |
|---|---|---|---|
| ಪಶ್ಚಿಮ : | ಇದೇ ಸರ್ವೆ ನಂಬರಿನಲ್ಲಿ ಕ್ರೈಸ್ತ ಜನಾಂಗದವರ ಸ್ಮಶಾನ 1.00 ಎಕರೆ | ಇದೇ ಸರ್ವೆ ನಂಬರಿನ ಮುಸ್ಲಿಂ ಜನಾಂಗದವರ ಸ್ಮಶಾನದ 1.00 ಎಕರೆ | ಸ.ನಂ. 36 |
| ಉತ್ತರ : | ಸ. ನಂ. 36 | ಸ.ನಂ. 36 | ಸ.ನಂ. 36 |
| ದಕ್ಷಿಣ : | ಗ್ಯಾಸ್ ಪೈಪ್ ಲೈನ್ ಹಾದುಹೋಗಿರುವ ಪ್ರದೇಶ | ಗ್ಯಾಸ್ ಪೈಪ್ ಲೈನ್ ಹಾದು ಹೋಗಿರುವ ಪ್ರದೇಶ | ಗ್ಯಾಸ್ ಪೈಪ್ ಲೈನ್‌ಹಾದು ಹೋಗಿರುವ ಪ್ರದೇಶ |

**ಷರತ್ತುಗಳು**

1) ಸದರಿ ಜಮೀನನ್ನು ಯಾವ ಉದ್ದೇಶಕ್ಕಾಗಿ ಕಾಯ್ದಿರಿಸಲಾಗಿದೆಯೋ ಅದೇ ಉದ್ದೇಶಕ್ಕೆ ಬಳಸತ್ತಕ್ಕದ್ದು, ಯಾವುದೇ ಕಾರಣಕ್ಕೂ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.

2) ಸದರಿ ಜಮೀನು ಕಾಯ್ದಿರಿಸಿದ ಉದ್ದೇಶಕ್ಕೆ ಅವಶ್ಯಕವಿಲ್ಲವೆಂದು ಕಂಡು ಬಂದಲ್ಲಿ ಕಂದಾಯ ಇಲಾಖೆಗೆ ಹಿಂತಿರುಗಿಸತಕ್ಕದ್ದು.

3) ಸದರಿ ಕಾಯ್ದಿರಿಸಿರುವ ಜಮೀನನ್ನು ಯಾವುದೇ ಸಂಸ್ಥೆ : ಇಲಾಖೆಗೆ ವರ್ಗಾಯಿಸುವಂತಿಲ್ಲ.

4) ಒಂದು ವೇಳೆ ಸದರಿ ಜಮೀನು ಯಾವುದೇ ಸಾರ್ವಜನಿಕ ಉದ್ದೇಶಕ್ಕೆ ಅಗತ್ಯವೆಂದು ಕಂಡು ಬಂದಲ್ಲಿ ಈ ಆದೇಶವನ್ನು ಹಿಂದಕ್ಕೆ ಪಡೆಯಲಾಗುವುದು.

5) ಸದರಿ ಜಮೀನಿಗೆ ಮೋಜಣಿದಾರರು ತಯಾರಿಸಿರುವ ನಕ್ಷೆಯಂತೆ ಚಕ್ಕುಬಂದಿ ನಿರ್ಧರಿಸಿದ ನಂತರ ಸಂಬಂಧಪಟ್ಟ ಗ್ರಾಮಪಂಚಾಯ್ತಿಗೆ ಹಸ್ತಾಂತರಿಸುವುದು.

6) ಈ ಜಮೀನಿನಲ್ಲಿ ಯಾವುದೇ ಕಟ್ಟಡ ಅಥವಾ ಇತರೆ ಯಾವುದಾದರೂ ಅಭಿವೃದ್ಧಿ ಕಾರ್ಯವನ್ನು ನಿರ್ವಹಿಸಬೇಕಾದಲ್ಲಿ ಈ ಪ್ರಾಧಿಕಾರದಿಂದ ಪೂರ್ವಾನುಮತಿ ಪಡೆದು ನಿರ್ವಹಿಸತಕ್ಕದ್ದು.

7) ಕಾಯ್ದಿರಿಸಿದ ಈ ಜಮೀನನ್ನು ಗ್ರಾಮಪಂಚಾಯಿತಿಗೆ ವಹಿಸಿಕೊಂಡು ತಂತಿಬೇಲಿ ನಿರ್ಮಿಸಿ ಸಂರಕ್ಷಿಸುವುದು. ಯಾವುದೇ ಒತ್ತುವರಿಯಾದಲ್ಲಿ ಗ್ರಾಮಪಂಚಾಯಿತಿಯನ್ನು ಹೊಣೆ ಮಾಡಲಾಗುವುದು.

8) ಮೇಲ್ಕಂಡ ಷರತ್ತುಗಳನ್ನು ಉಲ್ಲಂಘಿಸಿದ್ದಲ್ಲಿ ಸದರಿ ಆದೇಶವನ್ನು ರದ್ದುಪಡಿಸಲಾಗುವುದು.

ವಿಶೇಷ ಜಿಲ್ಲಾಧಿಕಾರಿಗಳು,

ಪಿ.ಆರ್. 1227 ಬೆಂಗಳೂರು ಜಿಲ್ಲೆ, ಬೆಂಗಳೂರು

**ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರುರವರ ನಡವಳಿಕೆಗಳು**

**ವಿಷಯ:** ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಯಲಹಂಕ ಹೋಬಳಿ, ಶ್ರೀನಿವಾಸಪುರ ಗ್ರಾಮದ ಸರ್ವೆ ನಂ:17 ರಲ್ಲಿನ 1-20 ಎಕರೆ/ಗುಂಟೆ ಜಮೀನನ್ನು ಮುಸ್ಲಿಂ ಸಮುದಾಯದವರ ಸ್ಮಶಾನಕ್ಕಾಗಿ ಕಾಯ್ದಿರಿಸಿರುವ ಬಗ್ಗೆ.

**ಉಲ್ಲೇಖ:** 1. ಸರ್ಕಾರದ ಪತ್ರದ ಸಂಖ್ಯೆ : ಆರ್‌ಡಿ 146 ಎಲ್ ಜಿ ಬಿ 2005 ದಿನಾಂಕ: 09.11.2005.
2. ಈ ಕಛೇರಿಯ ನಡವಳಿಕೆಗಳ ಸಮ ಸಂಖ್ಯೆ ದಿನಾಂಕ : 9.12.2005
3. ತಹಸೀಲ್ದಾರ್, ಬೆಂಗಳೂರು ಉತ್ತರ (ಅಪರ) ತಾಲ್ಲೂಕುರವರ ಪತ್ರದ ಸಂಖ್ಯೆ: ಎಲ್. ಎನ್. ಡಿ. ಸಿಆರ್: 385/2004-05 ದಿನಾಂಕ 03-02-2006

**ಪ್ರಸ್ತಾವನೆ :-**

ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಯಲಹಂಕ ಹೋಬಳಿ, ಶ್ರೀನಿವಾಸಪುರ ಗ್ರಾಮದ ಸರ್ವೆ ನಂ:17 ರಲ್ಲಿನ 1-20 ಎಕರೆ/ಗುಂಟೆ ವಿಸ್ತೀರ್ಣದ ಸರ್ಕಾರದ ಗೋಮಾಳದ ಜಮೀನನ್ನು ಉಲ್ಲೇಖ (1)ರ ಸರ್ಕಾರದ ದಿನಾಂಕ : 09-11-2005ರ ಪತ್ರದಲ್ಲಿನ ಪೂರ್ವಾನುಮೋದನೆಯಂತೆ ಕರ್ನಾಟಕ ಭೂಕಂದಾಯ ನಿಯಮಗಳು 1966 ಕಲಂ 94(4) ರಡಿ ಗೋಮಾಳ ಶೀರ್ಷಿಕೆಯಿಂದ ತಗ್ಗಿಸಿ ಕರ್ನಾಟಕ ಭೂ ಕಂದಾಯ ಅಧಿನಿಯಮ 1964ರ ಕಲಂ 71ರಡಿ ಮುಸ್ಲಿಂ ಸಮುದಾಯದ ಸ್ಮಶಾನಕ್ಕಾಗಿ ಉಲ್ಲೇಖ-(2)ರ ಈ ಕಛೇರಿ ಸಮಸಂಖ್ಯೆ ನಡವಳಿ ಆದೇಶದಲ್ಲಿ ಕಾಯ್ದಿರಿಸಿ ಸಂಬಂಧಿಸಿದ ಗ್ರಾಮ ಪಂಚಾಯಿತಿಗೆ ಉಸ್ತುವಾರಿ ವಹಿಸಲು ಸೂಚಿಸಲಾಗಿತ್ತು.

ದಲಿತ ವಿಮೋಚನಾ ಸೇನೆಯ ದಿನಾಂಕ : 04-02-2006ರ ಮನವಿಯನ್ನು ಪರಿಶೀಲಿಸಿ, ತಹಶೀಲ್ದಾರ್‌ರವರು ಉಲ್ಲೇಖ(2)ರ ಪತ್ರದಲ್ಲಿ ವರದಿ ಮಾಡಿದ್ದಾರೆ. ಸದರಿ ಜಮೀನನ್ನು ಹಸ್ತಾಂತರಿಸುವಾಗ ಕಂಡು ಬಂದ ಸ್ಥಿತಿಯಂತೆ ಸ್ಥಳ ಪರಿಶೀಲಿಸಿರುವುದಾಗಿ, ದಿನಾಂಕ : 31-01-2006ರಂದು ಹಾಜರಾದ್ದ ಗ್ರಾಮಸ್ಥರು ಸ್ಮಶಾನಕ್ಕೆ ಮಂಜೂರಾಗಿರುವ ಜಮೀನು ದಲಿತ ಸಮುದಾಯಕ್ಕೆ ಸೇರಿದವರ ಬಗರ್ ಹುಕುಂ ಸಾಗುವಳಿಯಲ್ಲಿ ಇದ್ದು, ಸದರಿಯವರು ನೀಲಿಗಿರಿ ಮರಗಳನ್ನು ಬೆಳೆಸಿರುತ್ತಾರೆಂದು, ಕಾಯ್ದಿರಿಸಿದ ಜಮೀನಿನ ಪೈಕಿ 0-10 ಗುಂಟೆ ಜಮೀನನ್ನು ಉಳಿಸಿಕೊಡಲು ಸಮ್ಮತಿಸಿದ್ದಾರೆಂದು ಆದರೆ ಬಗರ್ ಹುಕುಂ ಸಾಗುವಳಿದಾರರನ್ನು ಒತ್ತುವರಿಯಿಂದ ಖುಲ್ಲಾಪಡಿಸಿರುವುದಿಲ್ಲವೆಂದು, ಬೆಂಗಳೂರು ಮಹಾನಗರಪಾಲಿಕೆ ಸರಹದ್ದಿನಿಂದ 18 ಕಿ.ಮಿ. ಒಳಗೆ ಬರುತ್ತಿದ್ದು, ಹಸಿರು ಪಟ್ಟಿ ವಲಯದಲ್ಲಿರುವುದರಿಂದ ಮಂಜೂರು ಮಾಡಲು ಬರುವುದಿಲ್ಲವೆಂದು ವಜಾಪಡಿಸಿರುವುದಾಗಿ, ಸ್ಥಳದಲ್ಲಿ ಉಂಟಾಗಬಹುದಾದ ಗಲಭೆಗೆ ಅವಕಾಶವಿಲ್ಲದಂತೆ, ಈಗಾಗಲೇ ಕಾಯ್ದಿರಿಸಿರುವ 1-20 ಎ/ಗುಂ ಬದಲು, 1-10 ಎ/ಗುಂ ಜಮೀನನ್ನು ಕಾಯ್ದಿರಿಸಲು ವರದಿ ಮಾಡಿದ್ದಾರೆ.

ತಹಶೀಲ್ದಾರ್‌ರವರ ವರದಿ ಸ್ವಯಂ ವೇದ್ಯವುಳ್ಳದಾಗಿದ್ದು, ಸ್ಥಳದಲ್ಲಿನ ಗಲಭೆ ವಾತಾವರಣವನ್ನು ತಡೆಗಟ್ಟುವ ಹಿತದೃಷ್ಟಿಯಿಂದ ಈ ಹಿಂದೆ ಕಾಯ್ದಿರಿಸಿದ್ದ ಆದೇಶವನ್ನು ಮಾರ್ಪಡಿಸಿ, ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ತಿದ್ದುಪಡಿ ಆದೇಶ**

**ಸಂಖ್ಯೆ : ಎಲ್ ಎನ್ ಡಿ (ಎನ್.ಎ) ಸಿಆರ್ : 126/2004-05 ದಿನಾಂಕ : 20 ನೇ ಜುಲೈ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳಿಂದಾಗಿ, ಬೆಂಗಳೂರು ಉತ್ತರತಾಲ್ಲೂಕು (ಅಪರ) ಯಲಹಂಕ ಹೋಬಳಿ, ಶ್ರೀನಿವಾಸಪುರ ಗ್ರಾಮದ ಸ.ನಂ. 17ರಲ್ಲಿ 1-20 ಎ/ಗುಂ ವಿಸ್ತೀರ್ಣವನ್ನು ಕಾಯ್ದಿರಿಸಿದ್ದ ಈ ಕಛೇರಿ ಉಲ್ಲೇಖ(2) ರ ಆದೇಶವನ್ನು ಮಾರ್ಪಡಿಸಿ, ಮುಸ್ಲಿಂ ಸಮುದಾಯದ ಖಬರಸ್ಥಾನಕ್ಕೆ 1-10ಎ/ಗುಂ ವಿಸ್ತೀರ್ಣಕ್ಕೆ ಮಿತಿಗೊಳಿಸಿ, ಕರ್ನಾಟಕ ಭೂ ಕಂದಾಯ ಕಾಯ್ದೆ 1964, ಕಲಂ 71ರಡಿ ಕಾಯ್ದಿರಿಸಿ ಆದೇಶಿಸಿದೆ ಹಾಗೂ ಉಸ್ತುವಾರಿಗಾಗಿ ಸಂಬಂಧಿಸಿದ ಗ್ರಾಮ ಪಂಚಾಯಿತಿಗೆ ವಹಿಸಲು ತಹಶೀಲ್ದಾರ್‌ರವರಿಗೆ ಸೂಚಿಸಲಾಗಿದೆ.

ವಿಶೇಷ ಜಿಲ್ಲಾಧಿಕಾರಿಗಳು,

ಪಿ.ಆರ್. 1228 ಬೆಂಗಳೂರು ಜಿಲ್ಲೆ, ಬೆಂಗಳೂರು.

**ಅಬಕಾರಿ ಅಧೀಕ್ಷಕರು ಹಾಗೂ ಅಧಿಕೃತ ಅಧಿಕಾರಿಗಳು, ಇ.ಐ.ಬಿ. ಮೈಸೂರು-ಚಾಮರಾಜನಗರ ಜಿಲ್ಲೆ, ಮೈಸೂರು-ಇವರ ನ್ಯಾಯಾಲಯದ ನಡವಳಿ**

**ಉಪಸ್ಥಿತರು:** ಹೊನ್ನಪ್ಪ, ಅಬಕಾರಿ ಅಧೀಕ್ಷಕರು ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು-ಚಾಮರಾಜನಗರ ಜಿಲ್ಲೆ, ಮೈಸೂರು

| **ಫಿರ್ಯಾದುದಾರರು** | **ಪ್ರತಿವಾದಿ** |
|---|---|
| ಆರಕ್ಷಕ ವೃತ ನಿರೀಕ್ಷಕರು,<br>ಗುಂಡ್ಲುಪೇಟೆ ಪೊಲೀಸ್ ಠಾಣೆ,<br>ಗುಂಡ್ಲುಪೇಟೆ | ರಾಜು ಬಿನ್ ತಣ್ಣೆನ್ |

**ಪ್ರಸ್ತಾವನೆ :**

ದಿನಾಂಕ : 20-07-2000ರಂದು ದೊರೆತ ಖಚಿತ ವರ್ತಮಾನದ ಮೇರೆಗೆ ಆರಕ್ಷಕ ವೃತ್ತ ನಿರೀಕ್ಷಕರು ಮತ್ತು ತಮ್ಮ ಸಿಬ್ಬಂದಿಯೊಡನೆ ಬೆಳಗಿನ ಜಾವ 5:30 ಘಂಟೆ ಸಮಯದಲ್ಲಿ ಗುಂಡ್ಲುಪೇಟೆ ತಾಲ್ಲೂಕು, ಮಡಳ್ಳಿ, ಸರ್ಕಲ್ ಬಳಿ ಲಾರಿ ಸಂಖ್ಯೆ ಟಿಸಿಜೆ-5132 ರಲ್ಲಿ ಅಕ್ರಮವಾಗಿ 217 ಪ್ಲಾಸ್ಟಿಕ್ ಕ್ಯಾನ್‌ಗಳಲ್ಲಿ ತಲಾ 35 ಲೀಟರ್‌ನಂತೆ ಒಟ್ಟು 7563 ಲೀಟರ್ ಮದ್ಯಸಾರವನ್ನು 45 ಮೂಟೆ ಮುಸುಕಿನ ಜೋಳದ ಅಜು ಬಾಜುವಿನ ಮಧ್ಯ ಹುದುಗಿಸಿಟ್ಟುಕೊಂಡು ಹೊಂದಿ ಸಾಗಾಣಿಕೆ ಮಾಡುತ್ತಿದ್ದನ್ನು ಪತ್ತೆ ಹಚ್ಚಿ ವಾಹನ ಮತ್ತು ಮದ್ಯಸಾರವನ್ನು ವಶಪಡಿಸಿಕೊಂಡು ಚಾಲಕನನ್ನು ದಸ್ತಗಿರಿ ಮಾಡಿ, ಸಹಾಯಕ ಆರಕ್ಷಕ ಉಪ ನಿರೀಕ್ಷಕರು, ಗುಂಡ್ಲುಪೇಟೆ ಪೊಲೀಸ್ ಠಾಣೆ ಇವರು ಪ್ರ. ಮಾ. ವ ಸಂಖ್ಯೆ 151/2000ರಲ್ಲಿ ಕರ್ನಾಟಕ ಅಬ್ಕಾರಿ ಕಾಯಿದೆ ಕಲಂ 34,38(ಎ) ಮತ್ತು ಐ.ಪಿ.ಸಿ. 420ರ ಪ್ರಕಾರ ಪ್ರಕರಣ ದಾಖಲಿಸಿ, ಸಂಬಂಧಪಟ್ಟ ದಾಖಲಾತಿಗಳನ್ನು ಮತ್ತು ಮದ್ಯಸಾರವನ್ನು ಅಬಕಾರಿ ನಿರೀಕ್ಷಕರು, ಗುಂಡ್ಲುಪೇಟೆ ವಲಯ ಇವರಿಗೆ ಹಸ್ತಾಂತರಿಸಿರುತ್ತಾರೆ.

ವಶಪಡಿಸಿಕೊಂಡ ಮದ್ಯಸಾರದಲ್ಲಿ ಮಾದರಿ ತೆಗೆಯಲಾದ ಮದ್ಯಸಾರವನ್ನು ಸಹಾಯಕ ರಾಸಾಯನಿಕ ಪರೀಕ್ಷಕರಿಗೆ ಕಳುಹಿಸಿ, ವರದಿ ಪಡೆಯಲಾಗಿ 92.74% V.V ಮದ್ಯಸಾರದ ತೀಕ್ಷ್ಣತೆ ಇದ್ದು, ಮರು ಭಟ್ಟಿ ಇಳಿಸುವಿಕೆಯಿಂದ ಉಪಯೋಗಿಸಬಹುದೆಂದು ರಾಸಾಯನಿಕ ತಜ್ಞರ ವರದಿಯಿಂದ ದೃಢಪಟ್ಟಿರುತ್ತದೆ. ದಿನಾಂಕ: 07.11.2000ರ ಆದೇಶದಲ್ಲಿ 7561 ಲೀ. ಮದ್ಯಸಾರವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ. ಅಬಕಾರಿ ನಿರೀಕ್ಷಕರು, ಗುಂಡ್ಲು ಪೇಟೆ ವಲಯ ಇವರು ಲಾರಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವರದಿ ಮಾಡಿರುತ್ತಾರೆ.

ಈ ನಡುವೆ ದಿನಾಂಕ : 25.11.00 ರಂದು ಈ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಲಾರಿ ಸಂಖ್ಯೆ ಟಿಸಿಜೆ 5132 ವಾಹನಕ್ಕೆ ಸಂಬಂದಿಸಿದಂತೆ, ಶ್ರೀಮತಿ ಶಾಂತಿ ಕೋಂ ತಿನಕರನ್, ಮೇಲುಮುತ್ತನೂರು ಗ್ರಾಮ, ಮೊತ್ತಕ್ಕಲ್ಲು ಅಂಚೆ, ಜಂಗಂ ತಾಲ್ಲೂಕು, ತಿರುವಣ್ಣ ಮಲ್ಲೆ ಜಿಲ್ಲೆ, ತಮಿಳುನಾಡು ಇವರು ವಾಹನದ ಮಾಲೀಕಳೆಂದೂ, ಸದರಿ ಲಾರಿಯನ್ನು ತಿಂಗಳ ಬಾಡಿಗೆಯ ಮೇಲೆ ರೆಡ್ಡಿಯಾರ್ ಪಾಲ್ಕಂನ ವಾಸಿ, ಕಣ್ಣನ್ ಎಂಬುವರ ಮಗ ಕೆ. ರಾಜು ಎಂಬುವವರಿಗೆ ನೀಡಿದ್ದುದಾಗಿಯೂ, ವಾಹನದ ಆರ್. ಸಿ. ಪುಸ್ತಕವನ್ನು ಅವರ ವಕೀಲರ ಮೂಲಕ ಅರ್ಜಿಯನ್ನು ಸಲ್ಲಿಸಿ, ವಾಹನದ ಮಧ್ಯಂತರ ಬಿಡುಗಡೆಗಾಗಿ ಕೋರಿರುತ್ತಾರೆ.

ವಾಹನದ ಮಾಲೀಕತ್ವದ ವಿವರವುಳ್ಳ 'ಬಿ' ವಹಿಯನ್ನು ಕೋರಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ತಿರುವಣ್ಣ ಮಲ್ಲೈ, ಜಿಲ್ಲೆ, ತಮಿಳುನಾಡು ರಾಜ್ಯ ಇವರಿಗೆ ಈ ಪ್ರಾಧಿಕಾರದಿಂದ ದಿನಾಂಕ 16.10.01ರಂದು ಪತ್ರ ಬರೆಯಲಾಗಿದೆ. ಈ ಪ್ರಕರಣದ ದಾಖಲಾತಿಗಳನ್ನು ನೋಡಲಾಗಿ ಆರೋಪಿಯಾದ ರಾಜು ಮತ್ತು ವಾಹನ ಮಾಲೀಕರಾದ ಶ್ರೀಮತಿ ಶಾಂತಿ ಇವರಿಗೆ ಕರ್ನಾಟಕ ಅಬಕಾರಿ ಕಾಯಿದೆ ಕಲಂ 32 ಉಲ್ಲಂಘನೆಯು ಮೇಲ್ನೋಟಕ್ಕೆ ಕಂಡುಬಂದ ಕಾರಣ ಈ ಪ್ರಾಧಿಕಾರದಿಂದ ದಿನಾಂಕ 18.10.01ರಂದು ಕಲಂ 43(ಬಿ)ರ ಅಡಿಯಲ್ಲಿ ವಾಹನ ಮತ್ತು ಮದ್ಯಸಾರವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದೆಂದು 7 ದಿನ ಕಾಲಾವಕಾಶ ನೀಡಿ, ಕಾರಣ ಕೇಳುವ ನೋಟೀಸನ್ನು ನೀಡಲಾಗಿತ್ತು.

ಈ ಪ್ರಕರಣದ ವಿಚಾರಣೆಯನ್ನು ದಿನಾಂಕ : 28.11.2001ರಿಂದ ಪ್ರಾರಂಭಿಸಿ, ಕ್ರಮವಾಗಿ 28.11.01, 19.12.01, 26.12.01, 19.02.02, 05.03.02, 14.03.02, 03.05.02, 24.05.02, 05.06.02, 08.12.02, 08.01.2004, 12.02.04, 24.02.04, 16.03.04, 20.05.04, 11.05.04, 08.06.04, 13.07.04 ರವರೆಗೆ ವಿಚಾರಣೆಯ ದಿನಾಂಕವನ್ನು ನಿಗದಿಪಡಿಸಿ, ವಿಚಾರಣೆಗಾಗಿ ಸಾಕ್ಷಿದಾರರಿಗೆ ಮತ್ತು ವಾಹನ ಮಾಲೀಕರಿಗೆ ಮತ್ತು ಅವರ ಪರ ವಕೀಲರಿಗೆ ಅನೇಕ ಬಾರಿ ನೋಟೀಸ್‌ಗಳನ್ನು ನೋಂದಣಿ ಅಂಚೆ ಮೂಲಕ ಕಳುಹಿಸಲಾಗಿ, ಅರ್ಜಿದಾರರ ಜಿ.ಪಿ.ಎ. ಹೋಲ್ಡರ್ ಥಿನಕರನ್ ಇವರು ದಿನಾಂಕ: 19.02.02ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿರುವುದನ್ನು ಹೊರತು ಪಡಿಸಿದರೆ ಉಳಿದ ದಿನಾಂಕಗಳಂದು ವಿಚಾರಣಾ ನಡುವಳಿಗೆ ಗೈರು ಹಾಜರಾಗಿರುತ್ತಾರೆ. ಇದನ್ನು ಗಮನಿಸಿದರೆ, ತನ್ನ ಅರ್ಜಿಯ ವಿಲೆಯ ಕುರಿತು ಯಾವುದೇ ಪ್ರಯತ್ನ ನಡೆಸದಿರುವುದು ಸ್ಪಷ್ಟವಾಗಿರುತ್ತದೆ ಹಾಗೂ ಈ ಮೊಕದ್ದಮೆಯಲ್ಲಿ ಆರೋಪವನ್ನು ಹಲ್ಲಗಳೆಯಲು ಯಾವುದೇ ಸಾಕ್ಷ್ಯಾಧಾರಗಳನ್ನು ಹಾಜರುಪಡಿಸಿರುವುದಿಲ್ಲ. ಅಲ್ಲದೇ ಅಬಕಾರಿ ನಿರೀಕ್ಷಕರು, ಗುಂಡ್ಲುಪೇಟೆ ವಲಯ ಮತ್ತು ಸಾಕ್ಷಿಗಳನ್ನು ವಿಚಾರಣೆ ನಡೆಸಲಾಗಿದ್ದು, ಅಭಿಯೋಜನಕ್ಕೆ ಪೂರಕವಾಗಿರುತ್ತದೆ. ಆದ ಕಾರಣ ಸದರಿ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನವನ್ನು ಹೀಗೆಯೇ ಬಿಟ್ಟಲ್ಲಿ ಮಳೆ, ಗಾಳಿ ಮತ್ತು ಬಿಸಿಲಿನ ವಾತಾವರಣದ ವೈಪರೀತ್ಯಕ್ಕೆ ಸಿಲುಕಿ ಬಿಡಿ ಭಾಗಗಳು ಹಾಳಾಗಿ ತನ್ನ ಮೌಲ್ಯವನ್ನು ಕಳೆದು ಕೊಳ್ಳುವ ಸಾಧ್ಯತೆ ಹೆಚ್ಚಿರುವುದರಿಂದ ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ ಕಾರಣ ಈ ಕೆಳಕಂಡ ಆದೇಶ.

**ಸಂಖ್ಯೆ : ಡಿಟಿಸಿಆರ್/09/2000-01, ದಿನಾಂಕ : 25ನೇ ಜುಲೈ 2006**

ಹೊನ್ನಪ್ಪ, ಅಬಕಾರಿ ಅಧೀಕ್ಷಕರು ಹಾಗೂ ಅಧಿಕೃತ ಅಧಿಕಾರಿಗಳು, ಇ.ಐ.ಬಿ, ಮೈಸೂರು-ಚಾಮರಾಜನಗರ ಜಿಲ್ಲೆ, ಮೈಸೂರು ಆದ ನಾನು ಕರ್ನಾಟಕ ಅಬ್ಕಾರಿ ಕಾಯಿದೆ 1965 ಕಲಂ 43 (ಬಿ) ರ ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಅನುಸರಿಸಿ, ಕಲಂ43(ಸಿ)ರ ಅಡಿಯಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಈ ಪ್ರಕರಣದಲ್ಲಿ ಜಪ್ತು ಪಡಿಸಲಾದ ಟಿಸಿಜೆ-5132 ನೋಂದಣಿ ಸಂಖ್ಯೆಯ ಲಾರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿರುತ್ತೇನೆ.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುತ್ತದೆ.

(ಈ ಆದೇಶವನ್ನು ಇಂದು ಅಂದರೆ 2006ನೇ ಜುಲೈ 25ನೇ ತಾರೀಖಿನಂದು ವಿಷಯ ನಿರ್ವಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ಪ್ರಾಧಿಕಾರದ ಮೊಹರಿನೊಂದಿಗೆ ಹೊರಡಿಸಲಾಗಿದೆ.)

**ಹೊನ್ನಪ್ಪ**

ಪಿ.ಆರ್. 1167

ಅಬಕಾರಿ ಅಧೀಕ್ಷಕರು ಹಾಗೂ ಅಧಿಕೃತ ಅಧಿಕಾರಿಗಳು, ಇ.ಐ.ಬಿ.,
ಮೈಸೂರು - ಚಾಮರಾಜನಗರ ಜಿಲ್ಲೆ, ಮೈಸೂರು

## ಅಬಕಾರಿ ಅಧೀಕ್ಷಕರು ಹಾಗೂ ಅಧಿಕೃತ ಅಧಿಕಾರಿಗಳು, ಇ.ಐ.ಬಿ, ಮೈಸೂರು-ಚಾಮರಾಜನಗರ ಜಿಲ್ಲೆ, ಮೈಸೂರು-ಇವರ ನ್ಯಾಯಾಲಯದ ನಡವಳಿ

**ಉಪಸ್ಥಿತರು :** ಹೊನ್ನಪ್ಪ, ಅಬಕಾರಿ ಅಧೀಕ್ಷಕರು ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು-ಚಾಮರಾಜನಗರ ಜಿಲ್ಲೆ, ಮೈಸೂರು

| **ಪಿರ್ಯಾದುದಾರರು** | **ಪ್ರತಿವಾದಿ** |
|---|---|
| ಆರಕ್ಷಕ ಉಪ ನಿರೀಕ್ಷಕರು,<br>ಚಾಮರಾಜನಗರ ಪೂರ್ವ ಪೊಲೀಸ್ ಠಾಣೆ,<br>ಚಾಮರಾಜನಗರ | ಪುರುಷೋತ್ತಮ್ ಬಿನ್ ಮಾಧವನ್, (ಚಾಲಕ)<br>ರಾಜು ಅಲಿಯಾಸ್ ಥಾಮಸ್ ಬಿನ್ ವೆಲ್ಲಪ್ಪನ್<br>ಶ್ರೀಮತಿ ಆರ್. ಸುಮತಿ ಕೋಂ ಎಸ್. ರಾಧಾಕೃಷ್ಣನ್ (ವಾಹನದ ಮಾಲೀಕರು) |

**ಪ್ರಸ್ತಾವನೆ :**

ದಿನಾಂಕ : 18-06-03ರಂದು ಸಂಜೆ 5:00 ಘಂಟೆ ಸಮಯದಲ್ಲಿ ಆರಕ್ಷಕ ಉಪ ನಿರೀಕ್ಷಕರು, ಚಾಮರಾಜನಗರ ಪೂರ್ವ ಪೊಲೀಸ್ ಠಾಣೆ, ಚಾಮರಾಜನಗರ ಇವರಿಗೆ ದೊರೆತ ಖಚಿತ ವರ್ತಮಾನದ ಮೇರೆಗೆ ಚಾಮರಾಜನಗರ ತಾಲ್ಲೂಕಿನ ಪುಣಜನೂರು ಪೊಲೀಸ್ ತನಿಖಾ ಠಾಣೆಯ ಮುಂದೆ ಸಿಬ್ಬಂದಿ ಹಾಗೂ ಪಂಚರ ಜೊತೆ ರಸ್ತೆ ಕಾವಲು ಮಾಡುತ್ತಿದ್ದಾಗ ಅನುಮಾನಾಸ್ಪದವಾಗಿ ಬಂದ ಲಾರಿ ಟಿಎನ್-32/ವಿ-4221ನ್ನು ನಿಲ್ಲಿಸಿ, ತಪಾಸಣೆ ಮಾಡಿದಾಗ ಸದರಿ ಲಾರಿಗಳಲ್ಲಿ 10 ಕಬ್ಬಿಣದ ಸಿಲಿಂಡರ್‌ಗಳಲ್ಲಿ ಸುಮಾರು 8500 ಲೀಟರ್ ಮದ್ಯಸಾರವನ್ನು ಯಾವುದೇ ರಹದಾರಿ ಪತ್ರಗಳಿಲ್ಲದೇ ಅಕ್ರಮವಾಗಿ ಸಾಗಾಣಿಕೆ ಮಾಡುತ್ತಿದ್ದ ಮೇರೆಗೆ ವಾಹನ ಮತ್ತು ಮದ್ಯಸಾರವನ್ನು ವಶಪಡಿಸಿಕೊಂಡು ಮುಂದಿನ ಕ್ರಮಕ್ಕಾಗಿ ಅಬಕಾರಿ ನಿರೀಕ್ಷಕರು, ಚಾಮರಾಜನಗರ ವಲಯ ಇವರಿಗೆ ಹಸ್ತಾಂತರಿಸಿರುತ್ತಾರೆ. ಹಾಗೂ ಮೇಲ್ಕಂಡ ಆರೋಪಿಗಳನ್ನು ದಸ್ತಗಿರಿ ಮಾಡಲಾಗಿರುತ್ತದೆ.

ಈ ಪ್ರಕರಣದಲ್ಲಿ ಕರ್ನಾಟಕ ಅಬ್ಕಾರಿ ಕಾಯಿದೆ ಕಲಂ 32ರ ಉಲ್ಲಂಘನೆಯಾಗಿರುವುದು ಮೇಲ್ನೋಟಕ್ಕೆ ಕಂಡುಬಂದಿರುವುದರಿಂದ ಆರೋಪಿಗಳಾದ ಪುರುಷೋತ್ತಮ್ ಮತ್ತು ರಾಜು ಇವರಿಗೆ ಕಲಂ 43(ಬಿ)ರ ಅಡಿಯಲ್ಲಿ ಕಾರಣ ಕೇಳಿ ನೋಟೀಸನ್ನು ನೋಂದಣಿ ಅಂಚೆ ಮೂಲಕ ಕಳುಹಿಸಲಾಗಿ, ಸದರಿ ನೋಟೀಸ್ ವಿಳಾಸದಲ್ಲಿ ಇಲ್ಲವೆಂಬ ಷರಾದೊಂದಿಗೆ ಅಂಚೆ ಇಲಾಖೆಯವರು ಈ ಪ್ರಾಧಿಕಾರಕ್ಕೆ ಹಿಂದಿರುಗಿಸಿರುತ್ತಾರೆ. ಈ ಪ್ರಾಧಿಕಾರದಿಂದ ದಿನಾಂಕ:29.07.03ರಂದು ಮಾಲೀಕರ ವಿವರ ಮಾಹಿತಿಯನ್ನು ಕೋರಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ವಿಲ್ಲುಪುರಂ, ತಮಿಳುನಾಡು ರಾಜ್ಯ ಇವರಿಗೆ ಪತ್ರ ಬರೆಯಲಾಗಿದೆ.

ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಚಾಮರಾಜನಗರ ಇವರಿಗೆ ಈ ಪ್ರಾಧಿಕಾರದಿಂದ ಮೇಲ್ಕಂಡ ವಾಹನದ ಮೌಲ್ಯವನ್ನು ನಿಗದಿಪಡಿಸಿ ದೃಢೀಕರಣ ಪತ್ರ ನೀಡಲು ಪತ್ರ ಬರೆಯಲಾಗಿದ್ದು, ವಾಹನಕ್ಕೆ ರೂ. 4,50,000 ಗಳನ್ನು ನಿಗದಿಪಡಿಸಿ, ಈ ಪ್ರಾಧಿಕಾರಕ್ಕೆ ವರದಿ ಮಾಡಿರುತ್ತಾರೆ.

ವಶಪಡಿಸಿಕೊಂಡ ವಾಹನಕ್ಕೆ ಸಂಬಂಧಿಸಿದಂತೆ, ಶ್ರೀಮತಿ ಆರ್. ಸುಮತಿ ಕೋಎಸ್. ರಾಧಕೃಷ್ಣ ಇವರು ಅವರ ಪರ ವಕೀಲರಾದ ಶ್ರೀ ಎ.ಎಸ್. ಸಿದ್ದರಾಜುರವರ ಮೂಲಕ ದಿ: 06.12.03ರಂದು ವಕಾಲತ್ತಿನೊಂದಿಗೆ ಅರ್ಜಿಯನ್ನು ಸಲ್ಲಿಸಿ, ಮಧ್ಯಂತರ ವಶಕ್ಕೆ ಬಿಡುಗಡೆ ಮಾಡಿಕೊಡಬೇಕೆಂದು ಕೋರಿರುತ್ತಾರೆ.

ವಶಪಡಿಸಿಕೊಂಡ ಮದ್ಯಸಾರದಿಂದ ತೆಗೆಯಲಾದ ಮಾದರಿಯನ್ನು ಸಹಾಯಕ ರಸಾಯನಿಕ ಪರೀಕ್ಷಕರಿಗೆ ಕಳುಹಿಸಿ, ವರದಿ ಪಡೆಯಲಾಗಿ, Presence of alcohol is detected percentage of alcohol in .94.04% V.V to 95.24% V.V ಇರುವುದಾಗಿ ರಸಾಯನಿಕ ತಜ್ಞರ ವರದಿಯಿಂದ ದೃಢಪಟ್ಟಿರುತ್ತದೆ. ಈ ಪ್ರಕರಣದಲ್ಲಿ ಜಪ್ತಾದ 8500 ಲೀಟರ್ ಮದ್ಯಸಾರವನ್ನು ದಿನಾಂಕ : 09.01.2004ರ ಆದೇಶದಲ್ಲಿ ಸರ್ಕಾರಕ್ಕೆ ಮುಟ್ಟು ಗೋಲು ಹಾಕಿಕೊಂಡು ಮೆಃ ಮೈಷುಗರ್ ಕಂ.ಲಿ., ಮಂಡ್ಯ ಇವರಿಗೆ ಹಂಚಿಕೆ ಮಾಡಲಾಗಿದ್ದು, ಅದಕ್ಕೆ ತಗಲುವ ಮೌಲ್ಯವನ್ನು ಸರ್ಕಾರಕ್ಕೆ ಪಾವತಿ ಮಾಡಲಾಗಿದೆ.

29.07.03 ರಂದು ಬರೆಯಲಾದ ಪತ್ರಕ್ಕೆ ಯಾವುದೇ ಮಾಹಿತಿ ಬಂದಿಲ್ಲದ ಕಾರಣ ಮತ್ತೊಮ್ಮೆ ವಾಹನದ ಮಾಲೀಕರ ವಿವರ ಕೋರಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ವಿಲ್ಲುಪುರಂ, ತಮಿಳುನಾಡು ಇವರಿಗೆ ಪತ್ರ ಬರೆಯಲಾಯಿತು. ವಾಹನದ ಮಾಲೀಕತ್ವವುಳ್ಳ ಬಿ ವಹಿಯನ್ನು ಕಳುಹಿಸಿರುತ್ತಾರೆ.

ವಾಹನ ಮಧ್ಯಂತರ ವಶಕ್ಕೆ ಬಿಡುಗಡೆ ಮಾಡಿಕೊಡಲು ಸಲ್ಲಿಸಿದ ಅರ್ಜಿದಾರರ ಅರ್ಜಿಯನ್ನು ಈ ಪ್ರಾಧಿಕಾರವು ದಿನಾಂಕ 20.11.2004ರ ಆದೇಶದಲ್ಲಿ ತಿರಸ್ಕರಿಸಲಾಗಿದೆ.

ಮಾನ್ಯ ಸೆಷನ್ಸ್ ನ್ಯಾಯಾಲಯ, ಚಾಮರಾಜನಗರ ತನ್ನ ಕ್ರಿಮಿನಲ್ ಅಪೀಲು ಸಂಖ್ಯೆ : 58.2004, ದಿನಾಂಕ: 27.01.05 ರಲ್ಲಿ ಈ ಪ್ರಾಧಿಕಾರ ದಿನಾಂಕ : 20.11.04ರಂದು ತಿರಸ್ಕರಿಸಲಾದ ಅರ್ಜಿಯನ್ನು ರದ್ದುಪಡಿಸಿ, ಅರ್ಜಿದಾರರ ಅರ್ಜಿಯನ್ನು ಭಾಗಶಃ ಪುರಸ್ಕರಿಸಿ, "ಎದುರುದಾರರು ಅಮಾನತ್ತು ಪಡಿಸಿಕೊಂಡು ವಾಹನವನ್ನು ಮಧ್ಯಂತರ ಸುಪರ್ದಿಗೆ ವಹಿಸಿಕೊಡುವ ಕುರಿತು ತಮಗೆ ಸೂಕ್ತವಾದ ರೀತಿಯಲ್ಲಿ ಷರತ್ತುಗಳನ್ನು ವಿಧಿಸಿ, ಅರ್ಜಿದಾರರ ಅಹವಾಲನ್ನು ಸ್ವೀಕರಿಸಿ, ಕಾನೂನು ರೀತ್ಯಾ ಪರಿಗಣಿಸಿ, ಅರ್ಜಿಯನ್ನು ಇತ್ಯಾರ್ಥ ಮಾಡಬೇಕೆಂದು ಆದೇಶಿಸಿರುತ್ತಾರೆ ಹಾಗೂ ಅಧಿಕೃತ ಅಧಿಕಾರಿಗಳ ಮುಂದೆ ದಿನಾಂಕ: 28.01.05 ರಂದು ಖುದ್ದಾಗಿ ಅಥವಾ ವಕೀಲರ ಮುಖಾಂತರ ಹಾಜರಾಗಿ ತಮ್ಮ ಅಹವಾಲನ್ನು ಸಮರ್ಪಿಸಬೇಕೆಂದು ಮತ್ತು ಪ್ರಾಧಿಕೃತ ಅಧಿಕಾರಿಗಳು ಮೇಲೆ ಹೇಳಿದ ಆದೇಶದಂತೆ, ಕಾನೂನು ರೀತ್ಯಾ ಇತ್ಯಾರ್ಥ ಪಡಿಸಿ, ಸೂಕ್ತ ಆದೇಶ ನೀಡಬೇಕೆಂದು ತಿಳಿಸಲಾಗಿದೆ."

ಈ ಪ್ರಕರಣದ ದಾಖಲಾತಿಗಳನ್ನು ಪರಿಶೀಲಿಸಲಾಯಿತು. ಸೆಷನ್ಸ್ ನ್ಯಾಯಾಲಯದ ಆದೇಶದನ್ವಯ ಅರ್ಜಿದಾರರಾಗಲಿ ಅಥವಾ ಅವರ ಪರ ವಕೀಲರಾಗಲೀ ಮೇಲ್ಕಂಡ ದಿನಾಂಕದಂದು ಈ ಪ್ರಾಧಿಕಾರದ ಮುಂದೆ ಖುದ್ದಾಗಿ ಹಾಜರಾಗುವುದಾಗಲೀ ಹಾಗೂ ಲಿಖಿತ ಮೂಲಕ ತಮ್ಮ ಅಹವಾಲನ್ನು ಸಲ್ಲಿಸುವುದಾಗಲೀ ಸಲ್ಲಿಸಿರುವುಲ್ಲ. ಅರ್ಜಿದಾರರು ತನ್ನ ಅರ್ಜಿಯ ವಿಲೇವಾರಿಯ ಬಗ್ಗೆ ಯಾವುದೇ ಪ್ರಯತ್ನ ನಡೆಸಿರುವುಲ್ಲ ಹಾಗೂ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (3) ವರ್ಷಗಳಿಗೂ ಹೆಚ್ಚು ಕಾಲ ಗತಿಸಿರುತ್ತದೆ. ಇದನ್ನು ಗಮನಿಸಿದರೆ ತನ್ನ ಅರ್ಜಿಯ ವಿಲೇಯ ಬಗ್ಗೆ ಆಸಕ್ತಿ ಇರದಿರುವುದು ಸ್ಪಷ್ಟವಾಗಿ ಕಂಡುಬಂದಿರುತ್ತದೆ. ಅರ್ಜಿದಾರರಿಗೆ ಸಾಕಷ್ಟು ಕಾಲವಕಾಶ ನೀಡಿದರೂ ವಾಹನ ಬಿಡುಗಡೆಗಾಗಿ ಮುಂದೆ ಬಾರದ ಕಾರಣ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43 (ಎ) ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸಂಖ್ಯೆ : ಡಿಟಿಸಿಆರ್/228/2002-03, ದಿನಾಂಕ : 25 ನೇ ಜುಲೈ 2006**

ಹೊನ್ನಪ್ಪ ಅಬಕಾರಿ ಅಧೀಕ್ಷಕರು ಹಾಗೂ ಅಧಿಕೃತ ಅಧಿಕಾರಿಗಳು, ಇ.ಐ.ಬಿ, ಮೈಸೂರು-ಚಾಮರಾಜನಗರ ಜಿಲ್ಲೆ, ಮೈಸೂರು ಆದ ನಾನು ಕರ್ನಾಟಕ ಅಬ್ಕಾರಿ ಕಾಯಿದೆ 1965 ಕಲಂ 43(ಬಿ)ರ ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಅನುಸರಿಸಿ, ಕಲಂ 43(ಸಿ) ರ ಅಡಿಯಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಈ ಪ್ರಕರಣದಲ್ಲಿ ಜಪ್ತು ಪಡಿಸಲಾದ ಟಿ ಎನ್-32/ವಿ-4221 ನೋಂದಣಿ ಸಂಖ್ಯೆಯ ಲಾರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿರುತ್ತೇನೆ.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುತ್ತದೆ.

(ಈ ಆದೇಶವನ್ನು ಇಂದು ಅಂದರೆ 2006ನೇ ಜುಲೈ 25ನೇ ತಾರೀಖಿನಂದು ವಿಷಯ ನಿರ್ವಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ಪ್ರಾಧಿಕಾರದ ಮೊಹರಿನೊಂದಿಗೆ ಹೊರಡಿಸಲಾಗಿದೆ.)

**ಹೊನ್ನಪ್ಪ**

ಪಿ.ಆರ್. 1168

ಅಬಕಾರಿ ಅಧೀಕ್ಷಕರು ಹಾಗೂ ಅಧಿಕೃತ ಅಧಿಕಾರಿಗಳು, ಇ.ಐ.ಬಿ.,
ಮೈಸೂರು - ಚಾಮರಾಜನಗರ ಜಿಲ್ಲೆ, ಮೈಸೂರು

**ಅಬಕಾರಿ ಅಧೀಕ್ಷಕರು ಹಾಗೂ ಅಧಿಕೃತ ಅಧಿಕಾರಿಗಳು, ಇ.ಐ.ಬಿ, ಮೈಸೂರು-ಚಾಮರಾಜನಗರ ಜಿಲ್ಲೆ,**
**ಮೈಸೂರು-ಇವರ ನ್ಯಾಯಾಲಯದ ನಡವಳಿ**

**ಉಪಸ್ಥಿತರು :** ಹೊನ್ನಪ್ಪ, ಅಬಕಾರಿ ಅಧೀಕ್ಷಕರು ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು-ಚಾಮರಾಜನಗರ ಜಿಲ್ಲೆ, ಮೈಸೂರು

| **ಪಿರ್ಯಾದುದಾರರು** | **ಪ್ರತಿವಾದಿ** |
|---|---|
| ಅಬಕಾರಿ ನಿರೀಕ್ಷಕರು ನಂ.2,<br>ಗುಪ್ತ ವಾರ್ತಾ ವಿಭಾಗ,<br>ಮೈಸೂರು. | ರಾಜು ಮತ್ತು ಇತರರು. |

**ಪ್ರಸ್ತಾವನೆ :**

ದಿನಾಂಕ : 18-01-05ರಂದು ಬೆಳಗಿನ ಜಾವ 3:00 ಘಂಟೆ ಸಮಯದಲ್ಲಿ ಅಬಕಾರಿ ನಿರೀಕ್ಷಕರು ನಂ.2, ಗುಪ್ತ ವಾರ್ತಾ ವಿಭಾಗ, ಮೈಸೂರು -ಇವರು ಮೈಸೂರು ತಾಲ್ಲೂಕು, ಜಯಪುರ ಹೋಬಳಿ, ತಳೂರು ವೃತ್ತದಲ್ಲಿ ವಾಹನ ಟಾಟಾ ಮೊಬೈಲ್ ಸಂಖ್ಯೆ ಕೆಎ-09/ಎಂ-4402ರಲ್ಲಿ ಅಕ್ರಮವಾಗಿ 190.080 ಲೀ. ನಕಲಿ ಮದ್ಯ ಹಾಗೂ 70 ಲೀ. ಮದ್ಯಸಾರವನ್ನು ಹೊಂದಿ ಸಾಗಾಣಿಕೆ ಮಾಡುತ್ತಿದ್ದ ಬಗ್ಗೆ ವಾಹನ, ಒಂದು ರಿಲೆಯನ್ಸ್ ಮೊಬೈಲ್ ಹ್ಯಾಂಡ್ ಸೆಟ್ ಮತ್ತು ಅಬಕಾರಿ ವಸ್ತುಗಳನ್ನು ಜಪ್ತು ಮಾಡಿ, ಪ್ರ.ಮಾ.ವ. ಸಂಖ್ಯೆ 101/04-05 ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ ರೀತ್ಯಾ ಮೊಕದ್ದಮೆ ದಾಖಲಿಸಿ, ವಾಹನ ಮತ್ತು ಮುದ್ದೆ ಮಾಲನ್ನು ಸಂಬಂಧಪಟ್ಟ ದಾಖಲಾತಿಗಳೊಂದಿಗೆ ಅಬಕಾರಿ ನಿರೀಕ್ಷಕರು, ಸಿಟಿ ವಲಯ ನಂ.4, ಮೈಸೂರು-ಇವರಿಗೆ ಹಸ್ತಾಂತರಿಸಿ, ಸಂಬಂಧಪಟ್ಟ ದಾಖಲಾತಿಗಳನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ವಶಪಡಿಸಿಕೊಂಡ ಮದ್ಯ ಮತ್ತು ಮದ್ಯಸಾರಗಳಲ್ಲಿ ತೆಗೆಯಲಾದ ಮಾದರಿಯನ್ನು ರಸಾಯನಿಕ ಪ್ರಯೋಗಾಲಯಕ್ಕೆ ಒಳಪಡಿಸಿ, ವರದಿ ಪಡೆಯಲಾಗಿ ಮದ್ಯಸಾರದಲ್ಲಿ ಮೆಥನಾಲ್ ಅಂಶ ಪತ್ತೆಯಾಗಿರುತ್ತದೆ. ಆದ್ದರಿಂದ ಈ ಮದ್ಯ ಸಾರವು ಮಾನವ ಸೇವನೆಗೆ ಯೋಗ್ಯವಾಗಿರುವುದಿಲ್ಲವೆಂದು ರಸಾಯನಿಕ ತಜ್ಞರ ವರದಿಯಿಂದ ದೃಢಪಟ್ಟಿರುತ್ತದೆ.

ಅಬಕಾರಿ ನಿರೀಕ್ಷಕರು, ಸಿಟಿ ನಂ.4, ವಲಯ, ಮೈಸೂರು ಇವರು ದಿನಾಂಕ : 04.04.05 ರಂದು ಮನವಿಯನ್ನು ಸಲ್ಲಿಸಿ, ವಶಪಡಿಸಿಕೊಂಡ ಮದ್ಯ, ಮದ್ಯಸಾರ ಮತ್ತು ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ನಾಶಪಡಿಸಲು ಆದೇಶ ನೀಡಬೇಕೆಂದು ಕೋರಿರುತ್ತಾರೆ.

ವಶಪಡಿಸಿಕೊಂಡ ವಾಹನಕ್ಕೆ ಸಂಬಂಧಿಸಿದಂತೆ, ಪಿ. ಶಿವಕುಮಾರ್ ನಂ. 920/1, 1ನೇ ಮುಖ್ಯರಸ್ತೆ, ಲಕ್ಷ್ಮೀಪುರಂ, ಮೈಸೂರು ಇವರು ದಿನಾಂಕ : 04.04.05ರಂದು ಮನವಿಯನ್ನು ಸಲ್ಲಿಸಿ, ತನಗೆ ಜೀವನ ನಡೆಸಲು ಇದೊಂದೇ ವಾಹನವು ಆಧಾರವಾಗಿದ್ದು, ಬೇರೆ ಯಾವುದೇ ರೀತಿಯ ಆದಾಯವೂ ಇರುವುದಿಲ್ಲ ತನಗೆ ತಿಳಿಯದಂತೆ, ನನ್ನ ವಾಹನ ಚಾಲಕನು ಹಣದ ಆಸೆಗಾಗಿ ಮತ್ತು ತನ್ನ ಸ್ವಂತ ಲಾಭಕ್ಕಾಗಿ ಮಾಡಿರುವ ತಪ್ಪನ್ನು ಒಪ್ಪಿಕೊಂಡು ವಾಹನ ಚಾಲಕನಿಂದಾದ ತಪ್ಪನ್ನು ಮನ್ನಿಸಿ, ಇಲಾಖಾ ವತಿಯಿಂದ ಮೊಕದ್ದಮೆಯನ್ನು ತೀರ್ಮಾನಿಸಿಕೊಡಲು ಕೋರಿರುತ್ತಾರೆ. ಹಾಗೂ ವಾಹನಕ್ಕೆ ತಗಲುವ ಮೌಲ್ಯವನ್ನು ನಿಷ್ಕರ್ಷೆಮಾಡಿದ್ದಲ್ಲಿ ಅದನ್ನು ಸಂದಾಯ ಮಾಡಲು ಬದ್ದನಾಗಿರುವುದಾಗಿ ತಿಳಿಸಿರುತ್ತಾರೆ.

ಟಾಟಾ ಮೊಬೈಲ್ ಸಂಖ್ಯೆ ಕೆಎ-09/ಎಂ-4402ರ ವಾಹನದ ಮೌಲ್ಯವನ್ನು ನಿಗದಿಪಡಿಸಲು ಪ್ರಾದೇಶಿಕ ಸಾರಿಗೆ ಆಧಿಕಾರಿಗಳು, ಮೈಸೂರು ಇವರಿಗೆ ಈ ಪ್ರಾಧಿಕಾರದಿಂದ ದಿನಾಂಕ : 03.08.05 ರಂದು ಪತ್ರ ಬರೆಯಲಾಗಿದೆ.

ಈ ಪ್ರಕರಣದಲ್ಲಿ ಕರ್ನಾಟಕ ಅಬ್ಕಾರಿ ಕಾಯಿದೆ ಕಲಂ 32 ರ ಉಲ್ಲಂಘನೆಯ ಮೇಲ್ನೋಟಕ್ಕೆ ಕಂಡುಬಂದ ಕಾರಣ ಪ್ರತಿವಾದಿಗಳಿಗೆ ದಿನಾಂಕ: 05.06.2006 ರಂದು ಕಲಂ 43(ಬಿ)ರ ಅಡಿಯಲ್ಲಿ ಕಾರಣ ಕೇಳಿ ನೋಟೀಸ್‌ನ್ನು ರಾಜು, ಅಜಮ್, ಪಿ. ಶಿವಕುಮಾರ್ ಇವರಿಗೆ ನೋಂದಣಿ ಅಂಚೆ ಮೂಲಕ ಕಳುಹಿಸಲಾಗಿದ್ದು, ಪಿ. ಶಿವಕುಮಾರ್ ಇವರು ವಿಳಾಸದಲ್ಲಿ ಇಲ್ಲವೆಂಬ ಷರಾದೊಂದಿಗೆ ಅಂಚೆ ಇಲಾಖೆಯವರು ನೋಟೀಸ್‌ನ್ನು ಈ ಪ್ರಾಧಿಕಾರಕ್ಕೆ ಹಿಂದಿರುಗಿಸಿರುತ್ತಾರೆ.

ಈ ಪ್ರಕರಣದ ಕಡತ ಪರಿಶೀಲಿಸಲಾಯಿತು. ಅರ್ಜಿದಾರರು ಈ ಪ್ರಾಧಿಕಾರಕ್ಕೆ ಮನವಿಯನ್ನು ಸಲ್ಲಿಸಿ, ಅಪರಾಧವನ್ನು ಒಪ್ಪಿಕೊಂಡು ಪ್ರಕರಣವನ್ನು ಇಲಾಖಾ ಮುಖಾಂತರ ತೀರ್ಮಾನಿಸಲು ಕೋರಿರುತ್ತಾರೆ. ಅಲ್ಲದೇ ಸದರಿ ವಾಹನದ ಮೌಲ್ಯವನ್ನು ನಿಷ್ಕರ್ಷೆ ಮಾಡಿದ್ದಲ್ಲಿ ಅದನ್ನು ಸರ್ಕಾರಕ್ಕೆ ಸಂದಾಯ ಮಾಡಲು ಬದ್ದನಾಗಿರುವುದಾಗಿ ಕೋರಿರುತ್ತಾರೆ. ಇವರ ಮನವಿಯನ್ನು ಕರ್ನಾಟಕ ಅಬಕಾರಿ ಕಾಯಿದೆ ರೀತ್ಯಾ ಪರಿಶೀಲಿಸಲಾಗಿ, ಪ್ರಕರಣವನ್ನು ಇಲಾಖಾ ಮುಖಾಂತರ ತೀರ್ಮಾನಿಸಲು ಬರುವುದಿಲ್ಲ. ಅರ್ಜಿದಾರರ ಮನವಿಯನ್ನು ಹೊರತುಪಡಿಸಿ, ವಾಹನ ಮಾಲೀಕರು ಎಂಬುದಕ್ಕೆ ಯಾವುದೇ ದಾಖಲಾತಿಗಳನ್ನು ಹಾಜರುಪಡಿಸಿ, ವಾಹನ ತನ್ನದೆಂದು ಮಾಲೀಕತ್ವ ನಿರೂಪಿಸಿರುವುದಿಲ್ಲ.

ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (1) ವರ್ಷ (6) ತಿಂಗಳು ಕಳೆದರೂ ವಾಹನ ಬಿಡುಗಡೆಗಾಗಿ ಇದುವರೆವಿಗೂ ಪ್ರತಿವಾದಿಗಳ ಕಡೆಯಿಂದ ಯಾವುದೇ ಪ್ರಯತ್ನ ನಡೆದಿರುವುದಿಲ್ಲ. ಆದ ಕಾರಣ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನ ಮತ್ತು ಅಬಕಾರಿ ವಸ್ತುಗಳನ್ನು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43(ಸಿ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡು ಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸಂಖ್ಯೆ : ಡಿಟಿಸಿಆರ್/263/2004-05, ದಿನಾಂಕ : 25ನೇ ಜುಲೈ 2006**

ಹೊನ್ನಪ್ಪ, ಅಬಕಾರಿ ಅಧೀಕ್ಷಕರು ಹಾಗೂ ಅಧಿಕೃತ ಅಧಿಕಾರಿಗಳು, ಇ.ಐ.ಬಿ, ಮೈಸೂರು-ಚಾಮರಾಜನಗರ ಜಿಲ್ಲೆ, ಮೈಸೂರು ಆದ ನಾನು ಕರ್ನಾಟಕ ಅಬ್ಕಾರಿ ಕಾಯಿದೆ 1965 ಕಲಂ 43 (ಬಿ) ರ ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಅನುಸರಿಸಿ, ಕಲಂ43(ಸಿ)ರ ಅಡಿಯಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಈ ಪ್ರಕರಣದಲ್ಲಿ ಜಪ್ತು ಪಡಿಸಲಾದ ಕೆಎ-09/ಎಂ-4402 ನೋಂದಣಿ ಸಂಖ್ಯೆಯ ಟಾಟಾ ಮೊಬೈಲ್ ವಾಹನವನ್ನು ಮತ್ತು ಇತರ ಅಬ್ಕಾರಿ ವಸ್ತುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿರುತ್ತೇನೆ.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುತ್ತದೆ.

(ಈ ಆದೇಶವನ್ನು ಇಂದು ಅಂದರೆ 2006ನೇ ಜುಲೈ 25ನೇ ತಾರೀಖಿನಂದು ವಿಷಯ ನಿರ್ವಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ಪ್ರಾಧಿಕಾರದ ಮೊಹರಿನೊಂದಿಗೆ ಹೊರಡಿಸಲಾಗಿದೆ.)

**ಹೊನ್ನಪ್ಪ**
ಅಬಕಾರಿ ಅಧೀಕ್ಷಕರು ಹಾಗೂ ಅಧಿಕೃತ ಅಧಿಕಾರಿಗಳು, ಇ.ಐ.ಬಿ.,
ಮೈಸೂರು - ಚಾಮರಾಜನಗರ ಜಿಲ್ಲೆ, ಮೈಸೂರು

ಪಿ.ಆರ್. 1169

**ಪೊಲೀಸ್ ಕಮೀಷನರ್‌ರವರ ಕಛೇರಿ, ನಂ.1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ.**

**ನಂ/169/ ಸಂ.ವಿ/ಸಿಓಪಿ/2006. ದಿನಾಂಕ 15ನೇ ಜುಲೈ 2006.**

**ಅಧಿಸೂಚನೆ**

ಮೆ: ಇ.ಸಿ.ಸಿ.ಐ. ಲಿಮಿಟೆಡ್ ಕಂಪನಿಯವರು ಬೆಂಗಳೂರು ಮಹಾನಗರ ವಿಜಯನಗರ ಸಂಚಾರ ಪೊಲೀಸ್ ಠಾಣೆಯ ಸರಹದ್ದಿನಲ್ಲಿರುವ ಮಾಗಡಿ ಮುಖ್ಯ ರಸ್ತೆ ಮತ್ತು ಪಶ್ಚಿಮ ಕಾರ್ಡ್ ರಸ್ತೆ ಜಂಕ್ಷನ್ (ಎಂ.ಸಿ.ವೃತ್ತ)ನಲ್ಲಿ ಪಾಸ್ ಕಾಮಗಾರಿ ಸುಸೂತ್ರವಾಗಿ ನಡೆಯಲು ಹಾಲಿ ಇರುವ ಸಂಚಾರ ವ್ಯವಸ್ಥೆಯನ್ನು ಮೆಃ ಎ.ಸಿ.ಸಿ.ಐ. ಲಿಮಿಟೆಡ್ ಕಂಪನಿಯವರ ಕೋರಿಕೆ ಮೇರೆಗೆ ಮಾಗಡಿಕಾರ್ಡ್ ರಸ್ತೆಯ ಪಿ ಅಂಡ್ ಟಿ ಜಂಕ್ಷನ್‌ನಿಂದ ಎಂ.ಸಿ. ವೃತ್ತದ ಮೂಲಕ ಯಶವಂತಪುರಕ್ಕೆ ಹೋಗುವ ಮತ್ತು ಯಶವಂತಪುರದ ಕಡೆಯಿಂದ ವಿಜಯನಗರದ ಕಡೆಗೆ ಬರುವ ಎಲ್ಲಾ ವಾಹನಗಳ ಸಂಚಾರವನ್ನು (ಬಿ.ಎಂ.ಟಿ.ಸಿ. ಬಸ್ಸುಗಳನ್ನು ಹೊರತುಪಡಿಸಿ) ನಿಷೇಧಿಸಲಾಗಿರುತ್ತದೆ. ಹಾಗೂ ವಿಜಯನಗರದಿಂದ ಎಂ.ಸಿ. ವೃತ್ತದ ಕಡೆಗೆ ಬರುವ ಇತರೆ ವಾಹನಗಳು ಪಿ ಅಂಡ್ ಟಿ ಜಂಕ್ಷನ್ ಬಳಿ ಎಡ ತಿರುವು ಪಡೆದು ವೀರೇಶ್ ಚಿತ್ರಮಂದಿರದ ಬಳಿ ಮಾಗಡಿ ಮುಖ್ಯ ರಸ್ತೆಯನ್ನು ಸೇರಿ ಮುಂದಕ್ಕೆ ಚಲಿಸಿ ಇಂಡಸ್ಟ್ರೀಯಲ್ ಟೌನ್ 2ನೇ ಮುಖ್ಯ ರಸ್ತೆಯ ಬಳಿ ಎಡ ತಿರುವು ಪಡೆದು ಮುಂದೆ ಸಾಗಿ ಪಶ್ಚಿಮ ಕಾರ್ಡ್ ರಸ್ತೆಯ ಪಶ್ಚಿಮದ ಸರ್ವಿಸ್ ರಸ್ತೆ ಸೇರಿ, ಮುಂದೆ ಸಾಗಿ ನಂತರ ಫೈರ್ ಸ್ಟೇಷನ್ ಬಳಿ ಬಲ ತಿರುವು ಪಡೆದು ಪಶ್ಚಿಮ ಕಾರ್ಡ್ ರಸ್ತೆಯನ್ನು ಸೇರಲು ಅನುವು ಮಾಡಿಕೊಡಲಾಗಿರುತ್ತದೆ.

ರಾಜಾಜಿನಗರ ಇಂಡಸ್ಟ್ರಿಯಲ್ ಟೌನ್‌ನ 2ನೇ ಮುಖ್ಯ ರಸ್ತೆಯಲ್ಲಿ ಮತ್ತು ಪಶ್ಚಿಮ ಕಾರ್ಡ್ ರಸ್ತೆಯ ಪಶ್ಚಿಮ ಸರ್ವಿಸ್ ರಸ್ತೆಯಲ್ಲಿ ಸಂಚರಿಸುವ ವಾಹನಗಳ ಒತ್ತಡದಿಂದಾಗಿ ಈ ರಸ್ತೆಯಲ್ಲಿ ವಾಹನಗಳ ನಿಲುಗಡೆಯನ್ನು ಹಾಗೂ ಏಕ ಮುಖ ಸಂಚಾರದ ವ್ಯವಸ್ಥೆಯನ್ನು ಜಾರಿಗೊಳಿಸುವುದು ಅನಿವಾರ್ಯವಾಗಿರುತ್ತದೆ.

ಆದ್ದರಿಂದ, ಕಲಂ 115 ಮೋಟಾರು ವಾಹನ ಕಾಯ್ದೆ 1988 ಹಾಗೂ ಕಲಮ 3 ಕರ್ನಾಟಕ ಸಂಚಾರ ನಿಯಂತ್ರಣ ಕಾಯ್ದೆ 1960ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಎನ್. ಅಚ್ಯುತರಾವ್, ಐ.ಪಿ.ಎಸ್., ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ನನ್ನ ಅಧಿಕಾರ ವ್ಯಾಪ್ತಿಯಲ್ಲಿರುವ ಈ ಕೆಳಕಂಡ ರಸ್ತೆಗಳಲ್ಲಿ ವಾಹನಗಳ ನಿಲುಗಡೆಯನ್ನು ಹಾಗೂ ವಾಹನಗಳ ಸಂಚಾರವನ್ನು ನಿಷೇಧಿಸಲು ಆದೇಶಿಸಿರುತ್ತೇನೆ.

ರಾಜಾಜಿನಗರ ಇಂಡಸ್ಟ್ರಿಯಲ್ ಟೌನ್ 2ನೇ ಮುಖ್ಯ ರಸ್ತೆಯಲ್ಲಿ ಮಾಗಡಿ ಮುಖ್ಯ ರಸ್ತೆ ಜಂಕ್ಷನ್‌ನಿಂದ ಸರ್ವಿಸ್ ರಸ್ತೆ ಜಂಕ್ಷನ್‌ವರೆಗೆ ರಸ್ತೆಯ ಎರಡೂ ಕಡೆಗಳಲ್ಲಿ ವಾಹನಗಳ ನಿಲುಗಡೆಯನ್ನು ನಿಷೇಧಿಸಲಾಗಿದೆ.

ಪಶ್ಚಿಮ ಕಾರ್ಡ್ ರಸ್ತೆಯ ಪಶ್ಚಿಮ ಸರ್ವಿಸ್ ರಸ್ತೆಯಲ್ಲಿ ಫೈರ್ ಸ್ಟೇಷನ್ ಜಂಕ್ಷನ್‌ನಿಂದ ಎಂ.ಸಿ. ವೃತ್ತದವರೆಗೆ ಅಂದರೆ ಉತ್ತರದಿಂದ ದಕ್ಷಿಣದ ಕಡೆಗೆ ವಾಹನಗಳ ಸಂಚಾರವನ್ನು ನಿಷೇಧಿಸಿರುವುದಲ್ಲದೇ, ಈ ರಸ್ತೆಯಲ್ಲಿ ರಸ್ತೆಯ ಎರಡೂ ಕಡೆ ವಾಹನಗಳ ನಿಲುಗಡೆಯನ್ನು ನಿಷೇಧಿಸಲಾಗಿದೆ.

ಈ ಆದೇಶವು ಎಂ.ಸಿ. ವೃತ್ತದಲ್ಲಿ ಅಂಡರ್ ಪಾಸ್ ರಸ್ತೆ ನಿರ್ಮಾಣ ಕಾಮಗಾರಿ ಪೂರ್ಣಗೊಳ್ಳುವವರೆಗೆ ಜಾರಿಯಲ್ಲಿರುತ್ತದೆ.

ಹಾಗೆಯೇ 1988ರ ಮೋಟಾರು ವಾಹನ ಕಾಯ್ದೆ ಕಲಂ 116 ಹಾಗೂ 1960ರ ಕರ್ನಾಟಕ ಸಂಚಾರ ನಿಯಂತ್ರಣ ಕಾಯ್ದೆ 4ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಮೇಲ್ಕಂಡ ನಿರ್ಬಂಧವನ್ನು ಜಾರಿಗೊಳಿಸಲು ಅಗತ್ಯವಾದ ಸೂಚನಾ ಫಲಕಗಳನ್ನು ಅಗತ್ಯ ಸ್ಥಳಗಳಲ್ಲಿ ಹಾಕಲು ಆದೇಶಿಸಿರುತ್ತೇನೆ.

ಈ ಆದೇಶವನ್ನು ದಿನಾಂಕ : 15-07-2006ರಿಂದ ನನ್ನ ಸಹಿ ಹಾಗೂ ಮುದ್ರೆಯೊಂದಿಗೆ ಹೊರಡಿಸಿರುತ್ತೇನೆ.

**ಎನ್. ಅಚ್ಯುತರಾವ್**
ಪೊಲೀಸ್ ಕಮೀಷನರ್,
ಬೆಂಗಳೂರು ನಗರ

ಪಿ.ಆರ್. 1158

**ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಜಿಲ್ಲಾ ವಿಚಕ್ಷಣ ದಳ ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ಇವರ ನ್ಯಾಯಾಲಯದಲ್ಲಿ**

**ಡಿ.ಟಿ.ಸಿ.ಆರ್.ನಂ. 48/2004-05, ದಿನಾಂಕ : 17ನೇ ಜುಲೈ 2006**

**ಅಬಕಾರಿ ಉಪ ನಿರೀಕ್ಷಕರು ನಂ. ನರಸಿಂಹರಾಜಪುರ ಉಪ ವಲಯ ಇವರ ಪ್ರ.ವ.ವ.**

**ಸಂ. 01/2004-05 ದಿನಾಂಕ : 12ನೇ ಅಕ್ಟೋಬರ್ 2004**

**ಉಪಸ್ಥಿತರು :** ಶ್ರೀ ಬಿ.ಜಿ. ವಿಜಯೇಂದ್ರ ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಜಿಲ್ಲಾ ವಿಚಕ್ಷಣ ದಳ ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು.

**ಫಿರ್ಯಾದುದಾರರು**
ಅಬಕಾರಿ ಉಪ ನಿರೀಕ್ಷಕರು,
ನರಸಿಂಹರಾಜಪುರ ಉಪ ವಲಯ,

**ಆಪಾದಿತರು**
ಎಂ.ಎ. ಮಹಮದ ನಸೀರ್ ಬೀನ್ ಅಬ್ದುಲ್ ಖಾದರ್ ಮತ್ತು ಇತರರು

**ಅರ್ಜಿದಾರರು**
ಶ್ರೀ ಹೆಚ್. ಎಂ. ಯೋಗೀಶ್ ಮೆಃ ಶೃಂಗೇರಿ ಆರ್‌ಸೆಂಟ್ ಕಂಪನಿ ಆರ್. ಎಂ.ಸಿ. ಯಾರ್ಡ್, ಶಿವಮೊಗ್ಗ ಇವರ ಜಿ.ಪಿ.ಎ. ದಾರರಾದ ಶ್ರೀ ಹೆಚ್. ಎನ್. ಪ್ರದೀಪ್ ಬಿನ್ ಸದಾಶಿವ, ಮಡಬೂರು ಎನ್. ಆರ್. ಪುರ ತಾಲ್ಲೂಕು.

## ಪ್ರಕರಣದ ಮುಖ್ಯಾಂಶಗಳು

ದಿನಾಂಕ: 12-10-2004 ರಂದು ಅಬಕಾರಿ ಉಪ ನಿರೀಕ್ಷಕರು, ನರಸಿಂಹರಾಜ ಪುರ ಉಪ ವಲಯ ಇವರು ಸಿಬ್ಬಂದಿಯೊಡನೆ ನರಸಿಂಹರಾಜ ಪುರ ಮತ್ತು ಶಿವಮೊಗ್ಗದ ಮುಖ್ಯ ರಸ್ತೆಯಲ್ಲಿ ಗಸ್ತು ಕಾರ್ಯದಲ್ಲಿ ನಿರತರಾಗಿದ್ದಾಗ, ಮಡಬೂರು ಬಸ್ ನಿಲ್ದಾಣದ ಹತ್ತಿರ ಬರುತ್ತಿದ್ದ ದ್ವಿಚಕ್ರ ವಾಹನ ಸಂಖ್ಯೆ : ಕೆ.ಎ. 14-ಕ್ಯೂ : 2312 ರ ಎಂ.80 ಸ್ಕೂಟರ್‌ನ್ನು ಅನುಮಾನಸ್ಪದ ಮೇರೆಗೆ ತಡೆದು ನಿಲ್ಲಿಸಿ ಪರಿಶೀಲಿಸಿದಾಗ 2 ಪ್ಲಾಸ್ಟಿಕ್ ಗೊಬ್ಬರದ ಚೀಲಗಳಲ್ಲಿ 100 ಮಿಲಿಯ 300 ಸಾರಾಯಿ ಸ್ಯಾಚೆಟ್‌ಗಳ ಸಾಗಾಣಿಕೆಯ ಸಂಬಂಧ ಸ್ಕೂಟರ್ ಚಾಲನೆ ಮಾಡುತ್ತಿದ್ದ ವ್ಯಕ್ತಿ ಎಂ.ಎ. ಮಹಮದ್ ನಸೀರ್ ಬಿನ್ ಅಬ್ದುಲ್ ಖಾದರ್ ಮತ್ತೊಬ್ಬ ಎಂ.ಕೆ. ದಯಾನಂದ ಬಿನ್ ಕೊರಗ ಪೂಜಾರಿ ಎಂದು ತಿಳಿದು ಬಂದಿದ್ದು, ಸದರಿ ಸಾರಾಯಿ ಸಾಗಾಣಿಕೆಗೆ ಯಾವುದೇ ಅಧಿಕೃತ ರಹದಾರಿ ಪತ್ರಗಳನ್ನು ಸ್ಥಳದಲ್ಲಿ ಹಾಜರು ಪಡಿಸಿದಿದ್ದರಿಂದ ಇದು ತೆರಿಗೆ ರಹಿತ ಸಾರಾಯಿ ಸಾಗಾಣಿಕೆಯೆಂದು ಸ್ಥಳಕ್ಕೆ ಪಂಚರನ್ನು ಬರಮಾಡಿಕೊಂಡು, ದೊರೆತ ಸಾರಾಯಿ ಸ್ಯಾಚೆಟ್‌ಗಳನ್ನು ಅಜಮಾಯಿಷಿ ಮಾಡಲಾಗಿ 100 ಮಿಲಿಯ ಒಟ್ಟು 300 ಸಾರಾಯಿ ಸ್ಯಾಚೆಟ್‌ಗಳಿದ್ದು, ರಾಸಾಯನಿಕ ಪರೀಕ್ಷೆಗಾಗಿ 2 ಸಾರಾಯಿ ಸ್ಯಾಚೆಟ್‌ಗಳನ್ನು ಪ್ರತ್ಯೇಕವಾಗಿ ತೆಗೆದು ನಂತರ ಉಳಿದ ಸಾರಾಯಿ ಸ್ಯಾಚೆಟ್‌ಗಳೊಂದಿಗೆ ವಾಹನವನ್ನು ಸರ್ಕಾರದ ವಶಕ್ಕೆ ಅಮಾನತ್ತು ಪಡಿಸಿಕೊಂಡು ಆರೋಪಿಯೊಂದಿಗೆ ಕಛೇರಿಗೆ ಬಂದು ಮೊಕದ್ದಮೆ ಸಂಖ್ಯೆ : 1/2004 ದಿನಾಂಕ : 12-10-2004 ರಲ್ಲಿ ಪ್ರಕರಣವನ್ನು ದಾಖಲಿಸಿಕೊಂಡು ಪ್ರಥಮ ವರ್ತಮಾನ ವರದಿಯನ್ನು ಹಾಗೂ ಆರೋಪಿಯನ್ನು ನ್ಯಾಯಾಲಯಕ್ಕೆ ಹಾಜರುಪಡಿಸಿ, ವಶಪಡಿಸಿಕೊಂಡ ವಾಹನ ಹಾಗೂ ಸಾರಾಯಿಗೆ ಸಂಬಂಧಿಸಿದಂತೆ ಪ್ರಾಧಿಕಾರವು ಮುಟ್ಟುಗೋಲಿನ ನಡವಳಿಗಳನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ43 (ಎ) ಯ ರೀತ್ಯಾ ಪ್ರಾರಂಭಿಸಿ ವಾಹನವನ್ನು ಮಾಲೀಕತ್ವದ ಹಾಗೂ ಮೌಲ್ಯದ ವಿವರಗಳನ್ನು ನೀಡುವಂತೆ ಸಂಬಂಧಪಟ್ಟ ಪ್ರಾದೇಶಿಕ ಸಾರಿಗೆ ಅಧಿಕಾರಿಗಳನ್ನು ಕೋರಿ ಪತ್ರ ಬರೆದು ಮುಟ್ಟುಗೋಲಿನ ನಡವಳಿಗಳನ್ನು ಮುಂದುವರೆಸಲಾಯಿತು.

ದಿನಾಂಕ : 05-11-2004 ರಂದು ಶ್ರೀ ಹೆಚ್.ಎಂ. ಯೋಗೇಶ್ ಬಿನ್ ಹೆಚ್. ಮಹಾಬಲ ಭಟ್ ಎಂಬುವರು ಪ್ರಶ್ನಿತ ವಾಹನದ ಮಾಲೀಕರೆಂದು ಹಾಗೂ ಇವರ ಪರ ಜಿ.ಪಿ.ಎ. ದಾರ ಶ್ರೀ ಹೆಚ್. ಎನ್. ಪ್ರದೀಪ್ ಬಿನ್ ಸದಾಶಿವ ಮಡಬೂರು ಎನ್. ಆರ್.ಪುರ ಇವರು-

-ತಮ್ಮ ವಕೀಲರ ಮುಖಾಂತರ ಪ್ರಾಧಿಕಾರಕ್ಕೆ ಅರ್ಜಿಯನ್ನು ಸಲ್ಲಿಸಿ ವಾಹನವನ್ನು ತಾತ್ಕಾಲಿಕ ಸುಪರ್ದಿಗೆ ಬಿಡುಗಡೆಗೊಳಿಸಿಕೊಡಬೇಕಾಗಿ ಕೋರಿ, ಹಾಗೂ ಈ ಪ್ರಾಧಿಕಾರವು ವಿಧಿಸುವ ಷರತ್ತುಗಳನ್ನು ಪಾಲಿಸಲು ಬದ್ಧರಿರುವುದಾಗಿ ತಿಳಿಸಿರುತ್ತಾರೆ.

ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಇವರು ನೀಡಿರುವ "ಬಿ" ವರದಿಯನ್ನು ನೋಡಲಾಗಿ ಶ್ರೀ ಹೆಚ್. ಎಂ. ಯೋಗೇಶ್ ಮೆಃ ಶೃಂಗೇರಿ ಅರಸೆಂಟ್ ಕಂಪನಿ ಆರ್.ಎಂ.ಸಿ. ಯಾರ್ಡ್ ಶಿವಮೊಗ್ಗ ಎಂದು ತಿಳಿದು ಬಂದಿರುತ್ತದೆ. ಹಾಗೂ ಮೋಟಾರು ವಾಹನ ನಿರೀಕ್ಷಕರು ಪ್ರಾದೇಶಿಕ ಸಾರಿಗೆ ಅಧಿಕಾರಿಗಳವರ ಕಛೇರಿ, ಚಿಕ್ಕಮಗಳೂರು ಇವರು ಸದರಿ ವಾಹನಕ್ಕೆ ರೂ.9.000/- (ಒಂಭತ್ತು ಸಾವಿರ) ಮೌಲ್ಯವನ್ನು ನಿರ್ಧರಿಸಿ ವರದಿ ನೀಡಿರುತ್ತಾರೆ.

ನಂತರ ವಾಹನದ ಮಾಲೀಕರಿಗೆ ಅಬಕಾರಿ ಕಾಯ್ದೆ ಕಲಂ : 43 (ಬಿ) ಅಡಿಯಲ್ಲಿ ನೋಟಿಸ್ ನೀಡಲು ಕ್ರಮ ಕೈಗೊಂಡು ಪ್ರಾಧಿಕಾರದಲ್ಲಿ ಪ್ರಕರಣದ ವಿಚಾರಣೆಯನ್ನು ಪ್ರಾರಂಭಿಸಿ ಸರ್ಕಾರದ ಅಭಿಯೋಜನೆ ಪರ ಎರಡು ಇಲಾಖಾ ಸಾಕ್ಷಿಯನ್ನು ಹಾಗೂ ಮಹಜರ್ ಸಾಕ್ಷಿಯಾಗಿ ಇಬ್ಬರನ್ನು ವಿಚಾರಣೆಗೊಳಿಸಪಡಿಸಿ, ಅವರುಗಳ ಹೇಳಿಕೆಯನ್ನು ಪಡೆಯುವ ಬಗ್ಗೆ ಸಮನ್ಸ್ ನೀಡಲಾಯಿತು.

ದಿನಾಂಕ : 23-02-2006ರಂದು ತನಿಖಾಧಿಕಾರಿಯಾದ ಫಿಲೋಮಿನ ರಾಜು ಇವರು ಪ್ರಾಧಿಕಾರದ ಮುಂದೆ ಹಾಜರಾಗಿ ಅಭಯೋಜನೆಗೆ ಪೂರಕವಾಗಿ ಸಾಕ್ಷಿ ನೀಡಿದ್ದು, ನಿ.ಪಿ.1 ರಿಂದ 3ನ್ನು ಗುರ್ತಿಸಲಾಗಿರುತ್ತದೆ. ಈ ಮಧ್ಯೆ ಮಹಜರ್ ಸಾಕ್ಷಿಗಳಾದ ಶ್ರೀ ರತ್ನಾಕರ್ ಬಿನ್ ಅಣ್ಣೇಗೌಡ ಹಾಗೂ ಎ.ಪಿ. ರವಿ ಬಿನ್ ಪುಟ್ಟ ಸ್ವಾಮಿ ಗೌಡ ಇವರುಗಳಿಗೂ ನೋಟಿಸ್ ಜಾರಿಯಾಗಿದ್ದು, ಆದರೆ ಸದರಿ ಸಾಕ್ಷಿದಾರರು ವಿಚಾರಣಾ ಕಾಲಕ್ಕೆ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ. ಈ ಹಿಂದೆ ತನಿಖಾಧಿಕಾರಿಯವರು ವಿಚಾರಣೆಯಲ್ಲಿ ಪಾಟೀ ಸವಾಲನ್ನೂ ಸಹ ಮಾಡಿರುವುದಿಲ್ಲ. ಹಾಗೂ ಹಿಂದಿನ ಅನೇಕ ವಿಚಾರಣೆಗಳ ದಿನಗಳಂದು ಅರ್ಜಿದಾರರು ಹಾಗೂ ಅವರ ಪರ ವಕೀಲರು ನಿರಂತರವಾಗಿ ಗೈರು ಹಾಜರಾಗಿರುತ್ತಾರೆ.

ದಿನಾಂಕ : 03-06-2006 ರಂದು ಅರ್ಜಿದಾರರಾದ ಶ್ರೀ ಹೆಚ್. ಎಂ.ಯೋಗೇಶ್ ಹಾಗೂ ಇವರ ಅಧಿಕಾರ ಪತ್ರ ಪಡೆದ ಶ್ರೀ ಪ್ರದೀಪ್ ಇವರು ಅಬಕಾರಿ ಉಪ ನಿರೀಕ್ಷಕರು ಜಾರಿ ಮತ್ತು ತನಿಖಾ ಕಛೇರಿ, ನರಸಿಂಹರಾಜಪುರ ಇವರ ಮುಖಾಂತರ ಈ ಪ್ರಾಧಿಕಾರಕ್ಕೆ ಅರ್ಜಿಯನ್ನು ಸಲ್ಲಿಸಿ, ಸದರಿ ವಾಹನದ ಮುಟ್ಟುಗೋಲಿನ ನಡವಳಿಗಾಗಿ ಚಿಕ್ಕಮಗಳೂರಿಗೆ ಬಂದು ಹೋಗಲು ಹಾಗೂ ತಮ್ಮ ಪರ ವಾದ ಮಾಡುತ್ತಿರುವ ವಕೀಲರ ಖರ್ಚುವೆಚ್ಚಗಳನ್ನು ಭರಿಸಲು ಸಾಧ್ಯವಾಗದ ಕಾರಣ ಹಾಗೂ ಮಧ್ಯಂತರ ಆದೇಶದ ಮೇರೆಗೆ ವಾಹನವನ್ನು ತಾತ್ಕಾಲಿಕ ಸುಪರ್ದಿಗೆ ಪಡೆದುಕೊಳ್ಳಲು ಸಾರಿಗೆ ಅಧಿಕಾರಿಗಳು ನಿಗದಿಪಡಿಸಿರುವ ಮೊತ್ತವು ವಾಹನದ ಈಗಿನ ನೈಜ ಬೆಲೆಗಿಂತ ಹೆಚ್ಚಾಗಿರುವಂತೆ ಕಾಣ ಬಂದಿರುವುದರಿಂದ ಏಕಪಕ್ಷೀಯವಾಗಿ ವಾಹನವನ್ನು ತನಗೆ ಬಿಟ್ಟುಕೊಡಬೇಕೆಂದು, ಇಲ್ಲದಿದ್ದಲ್ಲಿ ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟು ಗೋಲು ಹಾಕಿಕೊಳ್ಳಲು ತಮ್ಮ ಅಭ್ಯಂತರವಿರುವುದಿಲ್ಲವೆಂದು ಹಾಗೂ ಈ ಬಗ್ಗೆ ತನ್ನ ತಕರಾರು ಯಾವುದು ಇರುವುದಿಲ್ಲವೆಂದು ತಿಳಿಸಿರುತ್ತಾರೆ.

ಈ ಮೇಲ್ಕಂಡ ಎಲ್ಲಾ ಅಂಶಗಳನ್ನು ಅವಲೋಕನ ಮಾಡಲಾಗಿ ಅರ್ಜಿದಾರರಿಗೆ ವಾಹನದ ಬಗ್ಗೆ ಯಾವುದೇ ಆಸಕ್ತಿ ಇರುವುದಿಲ್ಲವೆಂಬ ಅಂಶ ಸ್ಪಷ್ಟವಾಗಿರುವುದರಿಂದ ಹಾಗೂ ಪ್ರಕರಣದ ಶೀಘ್ರವಿಲೇವಾರಿಕೆ, ಸರ್ಕಾರಕ್ಕೆ ಬರುವ ರಾಜಸ್ವದ ಹಿತದೃಷ್ಟಿಯನ್ನು ನೋಡಲಾಗಿ ಅಲ್ಲದೇ ವಶಪಡಿಸಿಕೊಂಡಿರುವ ವಾಹನ ತನ್ನ ತಿಳುವಳಿಕೆಗೆ ಬಾರದೆ ವಾಹನವನ್ನು ಅಕ್ರಮ ಸಾರಾಯಿ ಸಾಗಾಣಿಕೆಗೆ ಉಪಯೋಗಿಸಲಾಗಿತ್ತು ಎಂಬುದನ್ನು ಸಾಬೀತುಪಡಿಸಲು ವಿಫಲವಾಗಿರುವುದರಿಂದ ಈ ಕೆಳಗಿನಂತೆ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ ಸಂಖ್ಯೆ : ಡಿ.ಇ.ಐ. ಬಿಃಡಿ.ಟಿ.ಸಿ.ಆರ್. 48/2004-05 ದಿನಾಂಕ : 17ನೇ ಜುಲೈ 2006**

ಬಿ.ಜಿ. ವಿಜಯೇಂದ್ರ, ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಜಿಲ್ಲಾ ವಿಚಕ್ಷಣ ದಳ, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ಆದ ನಾನು, ಕರ್ನಾಟಕ ಅಬಕಾರಿ ಅಧಿನಿಯಮ 1965 ಕಲಂಃ 43 (ಎ)ಯಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ನಿಯಮ 43(ಬಿ)ಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ ಅಬಕಾರಿ ಉಪ ನಿರೀಕ್ಷಕರು. ನರಸಿಂಹರಾಜ ಪುರ ಉಪ ವಲಯ ಇವರ ಮೊಕದ್ದಮೆ ಸಂಖ್ಯೆ ಃ 1/2004-05. ದಿನಾಂಕ : 12 -10 -2004ರಲ್ಲಿ ವಶಪಡಿಸಿಕೊಂಡಿರುವ ವಾಹನ ಸಂಖ್ಯೆ: ಕೆ.ಎ. 14 - ಕ್ಯೂಃ 2312 ಎಂ.80 ಸ್ಕೂಟರ್‌ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ. ಈ ಆದೇಶವನ್ನು ಇಂದು ಅಂದರೆ ದಿನಾಂಕಃ 17-07-2006ರಂದು ಶೀಘ್ರ ಲಿಪಿಗಾರರಿಗೆ ಉಖ್ತಲೇಖನ ಕೊಟ್ಟು ಬೆರಳಚ್ಚು ಮಾಡಿ, ಗಣಕಯಂತ್ರದಲ್ಲಿ ಮುದ್ರಿಸಿ ಪ್ರತಿಯನ್ನು ತಿದ್ದಿ, ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಪ್ರಾಧಿಕೃತ ಅಧಿಕಾರಿಗಳು ಹಾಗೂ
ಅಬಕಾರಿ ಅಧೀಕ್ಷಕರು, ಜಿಲ್ಲಾ ವಿಚಕ್ಷಣ ದಳ
ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು.

ಪಿ.ಆರ್. 1144